# ಮಾನಸ

ತಿಂಗಳ ಪತ್ರಿಕೆ ಜುಲೈ 2002

ಸಂಪುಟ 21 ಸಂಚಿಕೆ : 6





ಮುಖ ಪುಟ : ಕಲೆ - ಕನಕ ಮೂರ್ತಿ

ವಿನ್ಯಾಸ - ಅನ್ನು



ವಿಳಾಸ
''ಮಾನಸ'' ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ ಪೋಸ್ಟ್
ಬೆಂಗಳೂರು - 560 067
ಇ-ಮೈಲ್ : manasapathrike@yahoo.co.in



ಸೂಚನೆ: ಬಿಡಿ ಪ್ರತಿ 5-00 ರೂ.
ವಾರ್ಷಿಕ ಚಂದಾ 50-00 ರೂ.

ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು


## ಈ ಸಂಚಿಕೆಯಲ್ಲಿ.........

# ಸಂಪಾದಕೀಯ



ಗುಜರಾತ್‌ನಲ್ಲಿ ನಡೆದ ಮಾರಣ ಹೋಮದಲ್ಲಿ ಬಹಳಷ್ಟು ಮಹಿಳೆಯರು ಮುಂಚೂಣಿಯಲ್ಲಿದ್ದುದು ಮಹಿಳಾ ಚಳುವಳಿಗೆ ಆಘಾತಕಾರಕ ಸಂಗತಿಯಾಗಿದೆ. ಮುಸ್ಲಿಂ ಜನಾಂಗದ ಕೊಲೆ, ಲೂಟಿ, ಬೆಂಕಿ ಹಚ್ಚುವುದು, ಅತ್ಯಾಚಾರದಂತಹ ಕೃತ್ಯಗಳನ್ನೆಸಗಲು ದಲಿತ ಹಾಗೂ ಆದಿವಾಸಿಗಳನ್ನು ಸಂಘಟಿಸಿರುವುದು ಕಣ್ಣಿಗೆ ರಾಚುವ ಸತ್ಯವಾಗಿದೆ. ಇದು ನಮ್ಮ ದೇಶದಲ್ಲಿ ಬೆಳೆಯುತ್ತಿರುವ ಫ್ಯಾಸಿಸ್ಟ್ ಶಕ್ತಿಗಳನ್ನು ಎದುರಿಸುವಲ್ಲಿ ಬಹು ದೊಡ್ಡ ಸವಾಲಾಗಿದೆ. ಈ ಹಿನ್ನಲೆಯಲ್ಲಿ ಮಹಿಳಾ ಚಳುವಳಿ ಸಂದಿಗ್ಧ ಸ್ಥಿತಿಯಲ್ಲಿರುವುದು ಗೋಚರವಾಗುತ್ತದೆ.

ಗುಜರಾತಿನಲ್ಲಿ ಅಲ್ಪಸಂಖ್ಯಾತರ ಮೇಲೆ ನಡೆದ ಅಮಾನುಷ ಹಿಂಸೆಯನ್ನು ದೇಶಾದ್ಯಂತ ಮಹಿಳಾ ಸಂಘಟನೆಗಳು ಖಂಡಿಸಿವೆ. ವಿವರವಾದ ವರದಿ ಪ್ರಕಟಣೆ, ಪರಿಹಾರ ಕಾರ್ಯ, ಶಾಂತಿ ಸಮಿತಿ ರಚನೆ, ಪ್ರತಿಭಟನಾ ಮೆರವಣಿಗೆ ಮುಂತಾದ ತಾರತಮ್ಯಗಳನ್ನು ಹಮ್ಮಿಕೊಂಡಿವೆ. ಇವೆಲ್ಲಾ ಅಗತ್ಯವಾದ ಪ್ರತಿಕ್ರಿಯೆ ಯಾಗಿದ್ದರೂ ಸ್ತ್ರೀಯರ ವಿರುದ್ಧ ಸ್ತ್ರೀಯರನ್ನು ಎತ್ತಿಕಟ್ಟುವಂತಹ ವ್ಯವಸ್ಥಿತ ಶಕ್ತಿಗಳನ್ನು ಎದುರಿಸಬೇಕಾದ ಬಹುದೊಡ್ಡ ಸವಾಲು ಮಹಿಳಾ ಚಳುವಳಿಯ ಮುಂದಿದೆ.

ಸ್ವಾಯತ್ತ ಮಹಿಳಾ ಚಳುವಳಿಯು ಪಿತೃಪ್ರಧಾನ ಪರಿಕಲ್ಪನೆಯನ್ನು ಬಿತ್ತಿದ ಮನು ಧರ್ಮಶಾಸ್ತ್ರ ಹಾಗೂ ಬ್ರಾಹ್ಮಣಶಾಹಿಯನ್ನು ಪ್ರಶ್ನಿಸಿದರೂ ಜಾತಿ ವ್ಯವಸ್ಥೆಯನ್ನು ಗಂಭೀರವಾಗಿ ಪರಿಗಣಿಸದೇ ಇರುವುದು ಕಂಡು ಬರುತ್ತದೆ. ಕೇವಲ ಆದಿವಾಸಿ ಮಹಿಳೆ ಬನ್ನಾರಿ ಅಥವಾ ದಲಿತ ಮಹಿಳೆ ಮಥುರಾ ಘಟನೆಯ ಮೂಲಕ ಮಾತ್ರ ನಮ್ಮ ಜೀವನದಲ್ಲಿ ಆಳವಾಗಿ ಬೇರೂರಿರುವ ಹಾಗೂ ಬಹುಮುಖ್ಯ ಪಾತ್ರವಹಿಸುವ ಜಾತಿ ವ್ಯವಸ್ಥೆಯನ್ನು ಕುರಿತು ಮಹಿಳಾ ಚಳುವಳಿ ಮೌನವಹಿಸಿದೆ ಎಂದೇ ಹೇಳಬಹುದು. ಮಹಿಳಾ ಚಳುವಳಿಯು, ಜಾತಿ ರಹಿತ, ವರ್ಗರಹಿತ, ಸ್ತ್ರೀಪುರುಷ ಸಮಾನತೆಯ ಸಮಾಜದ ಕನಸನ್ನು ಕಂಡಿದ್ದರು. ಬಹುಪಾಲು ಚಟುವಟಿಕೆಗಳು ಮಧ್ಯಮವರ್ಗಗಳ ಬೇಡಿಕೆಯ ಸುತ್ತ ಕೇಂದ್ರೀಕರಣಗೊಂಡಿದ್ದನ್ನು ಕಾಣಬಹುದು. ಇದು ಅಗತ್ಯವಾದ ಚಟುವಟಿಕೆಗಳಾಗಿದ್ದರೂ ನಮ್ಮ ಸಮಾಜದಲ್ಲಿ ದಲಿತ, ಆದಿವಾಸಿ ಮಹಿಳೆಯರ ದೃಷ್ಟಿಕೋನದ ಹಿನ್ನಲೆಯಲ್ಲಿ ಮಹಿಳಾ ಸಮಸ್ಯೆಯನ್ನು ವಿಶ್ಲೇಷಿಸುವ ಮೊನಚು ಮರೆಯಾಯಿತು.

ಜಾತಿ ವ್ಯವಸ್ಥೆಯನ್ನು ಸೀಮಿತ ಅರ್ಥದಲ್ಲಿ ವಿಶ್ಲೇಷಿಸುವುದನ್ನು ಮೀರಿ ಮುಂದೆ ಹೋಗುವ ತುರ್ತು ಮಹಿಳಾ ಚಳುವಳಿಗಿದೆ. ಪಿತೃಪ್ರಧಾನ ಪರಿಕಲ್ಪನೆ ಪ್ರತಿಯೊಂದು ಜಾತಿಯಲ್ಲಿ ಹೇಗೆ ಕೆಲಸ ಮಾಡುತ್ತದೆ. ಇವುಗಳ ನಡುವಿರುವ ಸಂಬಂಧವೇನು? ಇದು ಯಾವ ಮಹಿಳೆಯರ ಮೇಲೆ ಏನು ಪರಿಣಾಮ ಬೀರುತ್ತದೆ? ಎಂಬುದರ ಬಗ್ಗೆ ಮಹಿಳಾ ದೃಷ್ಟಿಕೋನದ ಹಿನ್ನಲೆಯಲ್ಲಿ ಸುಧೀರ್ಘವಾದ ಚರ್ಚೆ ನಡೆಯ ಬೇಕಾಗುತ್ತದೆ.

ಜಾತಿ ಪ್ರಶ್ನೆಯೊಂದಿಗೆ ತಳುಕು ಹಾಕಿಕೊಂಡಿರುವ ಒಂದಕ್ಕೊಂದು ಪೂರಕವಾಗಿ ಕೆಲಸ ಮಾಡುವ ಬಂಡವಾಳ ಶಾಹಿ ಹಾಗು ಜಾಗತೀಕರಣ ಹಾಗೂ ರಾಜ್ಯ ಹೇಗೆ ದಲಿತ ಹಾಗೂ ಆದಿವಾಸಿಗಳ ನಡುವಿನ ಆಂತರಿಕ ಪಿತೃಪ್ರಧಾನತೆಯನ್ನು ಹೇಗೆ ಬಲಗೊಳಿಸುತ್ತದೆ ಎಂಬುದನ್ನು ಸಹ ಕೂಲಂಕುಷವಾಗಿ ಚರ್ಚೆ, ಅಧ್ಯಯನ ಹಾಗೂ ಕಾರ್ಯಕ್ರಮ ನಿರೂಪಣೆಯ ಮೂಲಕ ಮಾತ್ರ ಫ್ಯಾಸಿಸ್ಟ್ ಶಕ್ತಿಗಳನ್ನು ಎದುರಿಸಬಹುದಾಗಿದೆ.

– ಸಂಪಾದಕ ಮಂಡಳಿ

# ಮಹಿಳಾ ಚಳುವಳಿ ಎತ್ತ ಸಾಗಿದೆ ?

ಬಾರ್ಬರ ಎಪ್ಸ್‌ಸ್ಟೇಯಿನ್ 'ಮಂಥಲಿ ರೆವ್ಯೂ'ಪತ್ರಿಕೆಯ ಬೆಂಬಲಿಗರು. ಜೊತೆಗೆ ಸಂತಾಕ್ರೂಜ್‌ನ ಕ್ಯಾಲಿಫೋರ್ನಿಯ ವಿಶ್ವವಿದ್ಯಾಲಯದಲ್ಲಿ ಪ್ರಜ್ಞೆಯ ಇತಿಹಾಸದ ಕಾರ್ಯಕ್ರಮದಲ್ಲಿ ಉಪನ್ಯಾಸಕಿ ಕೂಡಾ. ಈಕೆ 1960ರಿಂದ 1980 ರವರೆಗೆ ಕ್ರಿಯಾಶೀಲವಾಗಿದ್ದ, ಹಾಗೂ ಅನೇಕ ಪ್ರಮುಖ ಬದಲಾವಣೆಗಳನ್ನು ಮಹಿಳೆಯರ ಬದುಕಿನಲ್ಲಿ ತಂದ ಎರಡನೇ ಸ್ತ್ರೀವಾದಿ ಅಲೆ ಸದ್ಯಕ್ಕೆ ತಣ್ಣಗೆ ಇರುವ ನೆಲೆಗಳನ್ನು, ಕಾರಣಗಳನ್ನು ಈ ಲೇಖನದಲ್ಲಿ ಪ್ರಚುರ ಪಡಿಸುತ್ತಾರೆ. ಚಿಂತನೆಯ ಹರವುಗಳನ್ನು ವಿಸ್ತೃತಗೊಳಿಸುವಲ್ಲಿ ಸಹಾಯಕವಾಗಬಹುದೆಂದು 'What happened to the women's movement' ಲೇಖನದ ಸಂಗ್ರಹಾನುವಾದವನ್ನು ಇಲ್ಲಿ ಪ್ರಕಟಿಸುತ್ತಿದ್ದೇವೆ.

1960ರ ಅಂತ್ಯದಿಂದ 1980ರವರೆಗೆ ಅಮೇರಿಕಾದಲ್ಲಿ ಮಹಿಳಾ ಚಳವಳಿ ಕ್ರಿಯಾಶೀಲವಾಗಿತ್ತು. ಸಾಂಸ್ಕೃತಿಕವಾಗಿ ಪ್ರಭಾವ ಹೊಂದಿದ್ದಲ್ಲದೇ ರಾಜಕೀಯವಾಗಿ ಶಕ್ತಿಯುತವಾಗಿತ್ತು. ಮಹಿಳಾ ಚಳವಳಿಯ ಉದಾರವಾದೀ ಘಟಕಗಳು ರಾಷ್ಟ್ರೀಯ ಸಂಘಟನೆಗಳನ್ನು ಹೊಂದಿದ್ದು, ಮರು ಉತ್ಪಾದನಾ (reproductive) ಹಕ್ಕುಗಳಿಗೆ, ಸಮಾನ ಹಕ್ಕುಗಳ ತಿದ್ದುಪಡಿಗೆ ಕ್ಯಾಂಪೇನ್‌ಗಳನ್ನು ಹಮ್ಮಿಕೊಂಡಿದ್ದವು. ರ್‍ಯಾಡಿಕಲ್ ಆಗಿರುವ ಮಹಿಳಾ ಚಳುವಳಿಯ ಭಾಗಗಳು ಮಹಿಳಾ ವಿಮೋಚನೆ, ಪ್ರಜ್ಞೆ ವಿಸ್ತೃತ ಸಂಘಟನೆಗಳ ಮೂಲಕ ಸಾಂಸ್ಕೃತಿಕ ಹಾಗೂ ಗ್ರಾಸ್ ರೂಟ್ ಯೋಜನೆಗಳನ್ನು ಹೊಂದಿದ್ದವು. ಮಹಿಳಾ ಚಳವಳಿಯ ಭಾಗವಾಗಿದ್ದ ಅನೇಕ ಸಂಘ ಸಂಸ್ಥೆಗಳು ಔದ್ಯೋಗಿಕ ಕ್ಷೇತ್ರಗಳಲ್ಲಿ, ಕಾರ್ಮಿಕ ಸಂಘಟನೆಗಳಲ್ಲಿ; ಸರ್ಕಾರದ ಬ್ಯೂರೋಕ್ರಸಿಯಲ್ಲಿ ಸಹ ಕೆಲಸ ಮಾಡುತ್ತಿದ್ದವು. ಒಟ್ಟಾಗಿ ಮಹಿಳಾ ಚಳವಳಿ ಅಮೇರಿಕಾದ ಮಹಿಳೆಯರ ದಿನನಿತ್ಯದ ಬದುಕಿನಲ್ಲಿ ಪ್ರಮುಖ ಬದಲಾವಣೆಗಳನ್ನು ತಂದಿತ್ತು. ಪುರುಷರಿಗೆ ಸೀಮಿತವಾಗಿದ್ದ ಔದ್ಯೋಗಿಕ ಕ್ಷೇತ್ರಗಳಲ್ಲಿ ಮಹಿಳೆಯರು ಕೆಲಸ ಮಾಡಲು ಅವಕಾಶ ದೊರಕಿತ್ತು. ಮಾಧ್ಯಮಗಳಲ್ಲಿ ಮಹಿಳೆಯರ ಚಿತ್ರಣ ಬದಲಾವಣೆಗೊಂಡಿತ್ತು ಮಹಿಳಾ ಸಮಾನತೆಯ ಬೇಡಿಕೆ ರಾಜಕೀಯ, ಧಾರ್ಮಿಕ, ಆರ್ಥಿಕ ಹಾಗೂ ಇತರ ಎಲ್ಲಾ ಕ್ಷೇತ್ರಗಳಲ್ಲೂ ಕಂಡು ಬಂದಿತ್ತು.

ಈ ಕಾರಣದಿಂದ ಮಹಿಳೆಯರ ಭಾಗವಹಿಸುವಿಕೆ ಹೆಚ್ಚಾಗಿ, ನಾಯಕತ್ವದಲ್ಲಿ ಬದಲಾವಣೆಯಾಗತೊಡಗಿತ್ತು. ಕುಟುಂಬ ಹಾಗೂ ವೈಯಕ್ತಿಕ ಸಂಬಂಧಗಳಲ್ಲಿ ಅಸಮಾನತೆ, ಹಾಗೂ ಶೋಷಣೆಯ ಪ್ರಶ್ನೆಯನ್ನು ರಾಜಕೀಯ ಪ್ರಶ್ನೆಯಾಗಿ ಎತ್ತಿ ವೈಯಕ್ತಿಕ ಎಂದು ಕರೆಯಲ್ಪಡುತ್ತಿದ್ದ ಸಮಸ್ಯೆಗಳ ಬಗ್ಗೆ ಸಾರ್ವಜನಿಕ ಚರ್ಚೆಯನ್ನು ಹುಟ್ಟು ಹಾಕಿ ಗಮನ ಸೆಳೆದಿತ್ತು. ಮಹಿಳಾ ಚಳುವಳಿ ಮಹಿಳೆಯರು ಮಾತನಾಡುವ ರೀತಿ ಹಾಗೂ ಯೋಚನಾ ಕ್ರಮಗಳಲ್ಲಿ ಬದಲಾವಣೆಯನ್ನು ತಂದಿತ್ತು.

ಮಹಿಳಾ ಚಳುವಳಿಯ ಸಾಧನೆ ಇಷ್ಟೆಲ್ಲಾ ಇದ್ದಾಗ್ಯೂ ಕೂಡಾ ಅಮೇರಿಕಾ ಸಮಾಜದಲ್ಲಿ ಮಹಿಳಾ ಸಮಾನತೆ ಸಾಧಿಸಲು ಇಂದು ಸಾಧ್ಯವಾಗಿಲ್ಲ. ಬಹು ಮಂದಿ ಮಹಿಳೆಯರು ಕಡಿಮೆ ಆದಾಯದ ಕೆಲಸಗಳಲ್ಲಿ ದುಡಿಯುತ್ತಿದ್ದಾರೆ. ಮಹಿಳೆಯರ ವಿರುದ್ಧದ ಹಿಂಸೆ ಅತ್ಯಧಿಕವಾಗಿದೆ. ಕೌಟಂಬಿಕ ಹೊಣೆಗಳು, ಮಕ್ಕಳು ಹೆಂಗಸರ ಜವಾಬ್ದಾರಿಗಳಾಗಿವೆ. 1960ರಿಂದ 1970ರವರೆಗೆ ಕುಟುಂಬ ಹಾಗೂ ವೈಯಕ್ತಿಕ ಸಂಬಂಧದ ನೆಲೆಯಲ್ಲಿನ ಅಧಿಕಾರದ ಅಸಮಾನತೆ ಕುರಿತು ಸ್ತ್ರೀವಾದಿಗಳು ವಿರೋಧಿಸಿದ್ದಾಗ್ಯೂ ಸಹ ಅವು ಇಂದಿಗೂ ಮುಂದುವರಿಯುತ್ತಲೇ ಇವೆ.

ದುರಂತವೆಂದರೆ ಈಗ ಮಾಸ್ ಮಹಿಳಾ ಚಳುವಳಿ ಕಂಡುಬರುತ್ತಿಲ್ಲ. ಮಹಿಳೆಯರಿಗಾಗಿ ದುಡಿಯುವ ಅನೇಕ ಸಂಸ್ಥೆಗಳಿವೆ. ರಾಷ್ಟ್ರೀಯ ಮಹಿಳಾ ಸಂಘಟನೆಗಳು, ಪರಿಸರ, ಆರೋಗ್ಯ, ಸಾಮಾಜಿಕ ನ್ಯಾಯ - ಹೀಗೆ ಮಹಿಳಾ ಸಮಸ್ಯೆಗಳನ್ನು ಎತ್ತಿಕೊಳ್ಳುವ ಸಂಘಟನೆಗಳಿವೆ. ಆದರೆ ಒಂದು ಕಾಲದಲ್ಲಿ ಅತ್ಯಂತ ಹೆಚ್ಚು ಮಹಿಳಾ ಸದಸ್ಯತ್ವವನ್ನು ಹೊಂದಿದ್ದ ಸಂಘಟನೆಗಳು ಇಂದು ಬ್ಯೂರೋಕ್ರಟಿಕ್ ರಚನೆಗಳನ್ನು ಹೊಂದಿ, ಸಂಬಳ ಪಡೆಯುವ ಸದಸ್ಯರಿಂದ ನಡೆಸಲ್ಪಡುತ್ತಿವೆ. ಒಂದು ಕಾಲಕ್ಕೆ ತಾತ್ವಿಕ ಚಿಂತನೆಗೆ ಎಡೆ ಮಾಡಿಕೊಟ್ಟು ಕ್ರಿಯಾಶೀಲವಾಗಿದ್ದ ಮಹಿಳಾ ಚಳವಳಿ ಇಂದು ಮಹಿಳೆಯರ ಬದುಕಿನ ಸ್ಥಿತಿಯ ಬಗ್ಗೆ ತನ್ನ ಕಾಳಜಿಯನ್ನು ಕಳೆದುಕೊಂಡಿದೆ.

ಇದು ಎರಡು ರೀತಿಯ ಪ್ರಶ್ನೆಯನ್ನು ಎತ್ತುತ್ತದೆ. (1) ಅಷ್ಟೊಂದು ಪ್ರಮುಖ ಬದಲಾವಣೆ ತಂದ ಮಹಿಳಾ ಚಳವಳಿ ಸ್ಥಗಿತಗೊಳ್ಳುತ್ತಿರುವ ಬಗ್ಗೆ ಚರ್ಚೆ ಏಕಾಗುತ್ತಿಲ್ಲ? (2) ಮಹಿಳಾ ಚಳವಳಿಯ ಸ್ಥಗಿತಕ್ಕೆ ಕಾರಣಗಳೇನು?

## ಯಾಕೆ ಮೌನದ ಸ್ಥಿತಿ?

ಮಹಿಳಾ ಚಳುವಳಿಯು ಇಳಿಮುಖವಾಗುತ್ತಿರುವುದು - ಬಲಪಂಥೀಯರು ಸ್ತ್ರೀವಾದವನ್ನು ಆಕ್ರಮಣ ಮಾಡುತ್ತಿರುವುದರೊಂದಿಗೆ ತಳುಕು ಹಾಕಿಕೊಂಡಿರುವುದಲ್ಲದೇ, ಇತರೇ ಪ್ರಗತಿಪರ ಚಳುವಳಿಗಳ ಇಳಿಮುಖದೊಂದಿಗೆ ಕೂಡಾ ಸಂಬಂಧ ಹೊಂದಿದೆ. ಕೆಲವಾರು ದಶಕಗಳ ಹಿಂದೆಗಿಂತಲೂ ಈಗ ಕಪ್ಪು ಜನಾಂಗದವರ ಹೋರಾಟಗಳು ಬಲಹೀನವಾಗಿರುವುದಲ್ಲದೇ, ಒಡೆದು ವಿಭಾಗಗಳಾಗಿವೆ. ಪರಿಸರ, ಲೆಸಬಿಯನ್ ಹಾಗೂ ಗೇ ಸಂಘಟನೆಗಳು ತಮ್ಮ ದಿಕ್ಕು ಹಾಗೂ ಸ್ಪಷ್ಟತೆಯನ್ನು ಕಳೆದುಕೊಂಡಿವೆ. ಅನೇಕ ಸ್ತ್ರೀವಾದಿಗಳು ಹಾಗೂ ಪ್ರಗತಿಪರರು ಚಳುವಳಿಯ ಬಲಹೀನತೆಯನ್ನು ಸಾರ್ವಜನಿಕ ಚರ್ಚೆಯಾಗಿಸುವುದನ್ನು ತಡೆಗಟ್ಟುತ್ತಿದ್ದಾರೆ. ಯಾಕೆಂದರೆ ಬಲಹೀನವೆಂದು ಒಪ್ಪಿಕೊಂಡರೆ ಇತರರಿಗೆ ಅಸ್ತ್ರಗಳನ್ನು ನೀಡಿದಂತಾಗುತ್ತದೆ ಎಂಬ ಅಳುಕಿನಿಂದಾಗಿ - ಚರ್ಚೆಗೆ ಒಡ್ಡುತ್ತಲೇ ಇಲ್ಲ. ಆದರೆ ಇದು ಸಮರ್ಪಕವಾದ ಉತ್ತರವಾಗುವುದಿಲ್ಲ. ಮಹಿಳಾ ಚಳುವಳಿ ಹಿನ್ನಲೆಗೆ ಸರಿಯುವುದಲ್ಲಿ ಮೊದಲೇ ಹೇಳಿದ ಹಾಗೆ ಬಲಪಂಥೀಯರ ಪಾತ್ರ ಮುಖ್ಯ. ಅವರು ಸ್ತ್ರೀವಾದಿಗಳ ಗರ್ಭಪಾತದಂತಹ ಹಕ್ಕುಗಳ ಮೇಲಿನ ಯೋಜನೆಗಳನ್ನು ನಕಾರಾತ್ಮಕವಾಗಿಸುತ್ತಿದ್ದಾರೆ. ಆದರೆ ಹೊರಗಡೆಯ ಆಕ್ರಮಣಗಳಿಗಿಂತ ಮುಖ್ಯವಾಗಿ ಮಹಿಳಾ ಚಳುವಳಿಯ ಒಳಗೇ ಜರೂರತೆಯ ಪ್ರಜ್ಞೆಯೇ ಕಳೆದುಹೋಗಿರುವುದು ಮುಖ್ಯ ಕಾರಣವಾಗಿದೆ. ಮಹಿಳಾ ಚಳುವಳಿ ಯಾಕೆ ಕುಂಠಿತವಾಗಿದೆ ಎಂಬುದನ್ನು ಅರ್ಥ ಮಾಡಿಕೊಳ್ಳುವುದರಿಂದ, ಮೊದಲಿನ ತರಹದ ಚಳುವಳಿಯನ್ನು ಮರು ಹುಟ್ಟುಹಾಕಲು ಸಾಧ್ಯವಾಗದಿದ್ದರೂ, ಹೊಸ ದಿಕ್ಕುಗಳತ್ತ ಆದರೂ ಚಲಿಸಬಹುದಾಗಿದೆ.

ಅಮೇರಿಕಾದಲ್ಲಿ ಮಹಿಳಾ ಚಳುವಳಿಯ ದೌರ್ಬಲ್ಯಗಳನ್ನು ಚರ್ಚಿಸದಿರುವುದಕ್ಕೆ ಇನ್ನೊಂದು ಕಾರಣವಿರಬಹುದು. 2ನೇ ಮಹಿಳಾ ಚಳುವಳಿಯ ಅಲೆಯು ಮೊದಲಿನ ಮಹಿಳಾ ಚಳುವಳಿಯ ಅಲೆ ಕಾಣೆಯಾದ ಹಾಗೆ ಕಾಣೆಯಾಗಬಹುದು ಎಂಬ ಭಯವಿರಬಹುದು. 19ನೆ ಶತಮಾನದ ಅಂತ್ಯದಲ್ಲಿ ಹಾಗೂ 20ನೆಯ ಶತಮಾನದ ಆದಿಯಲ್ಲಿ ಕಾಣಿಸಿಕೊಂಡ ಮೊದಲನೇ ಮಹಿಳಾ ಚಳುವಳಿಯ ಅಲೆಯು ಪೂರ್ತಿಯಾಗಿ 4 ದಶಕಗಳ ಕಾಲ ಚರಿತ್ರೆಯ ನೆನಪಿನಲ್ಲಿ ಸೇರಿ ಹೋಗಿತ್ತು. ಬಹುಶಃ ಬಿಳಿಯರಿಗೆ, ಮಧ್ಯಮವರ್ಗ, ಹಾಗೂ ಉನ್ನತ ಮಧ್ಯಮವರ್ಗಕ್ಕೆ ಸೇರಿದವರಿಗೆ ಮಾತ್ರ ಮೊದಲನೇ ಮಹಿಳಾ ಚಳವಳಿ ಸೀಮಿತವಾದ್ದರಿಂದ ಅದು ಚರಿತ್ರೆಯ ಪುಟಗಳಿಗೆ ಸೇರಿರಬಹುದು ಎಂಬ ವಿವರಣೆಯನ್ನು ನಂತರದ ಸ್ತ್ರೀವಾದಿಗಳು ನೀಡಿದ್ದರು. ಜೊತೆಗೆ ಅವರ ಸೀಮಿತ ದೃಷ್ಟಿಕೋನವು ಟೀಕೆಗೆ ಒಳಗಾಗಿತ್ತು. ಕಾಲಾಂತರದಲ್ಲಿ ಮೊದಲನೇ ಮಹಿಳಾ ಚಳುವಳಿಯು ಇತರೇ ಪ್ರಗತಿಪರ ಚಳುವಳಿಗಳಿಂದ ದೂರವಾಗಿ ಸೀಮಿತ ವಲಯದಲ್ಲಷ್ಟೇ ಕೆಲಸ ಮಾಡತೊಡಗಿತ್ತು. ಹಾಗಾಗಿ ಸಂಪ್ರದಾಯವಾದಿಗಳು ಸುಲಭವಾಗಿ ಮಹಿಳಾ ಚಳುವಳಿಯನ್ನು ಮೂಲೆಗೆ ತಳ್ಳಿದ್ದರು.

ಆದರೆ ಚಳುವಳಿಯ ಎರಡನೆಯ ಅಲೆಯು ವಿಶಾಲವಾದ ಹಾಗೂ ಭಿನ್ನವಾದ ದೃಷ್ಟಿಕೋನವನ್ನೇ ಹೊಂದಿದೆ. ಅಮೇರಿಕಾದ ರಾಜಕೀಯದಲ್ಲಿ ಏನು ಬದಲಾವಣೆ ಆದರೂ ಕೂಡಾ ಸ್ತ್ರೀವಾದವನ್ನು ಮೂವತ್ತು, ನಲವತ್ತು, ಐವತ್ತರ ದಶಕದಲ್ಲಿ ಅಳಿಸಿದ ಹಾಗೆ ಅಳಿಸಿ ಹಾಕಲು ಸಾಧ್ಯವಾಗುವುದಿಲ್ಲ. ಕಳೆದ ಮೂರು ದಶಕಗಳಲ್ಲಿ ಸ್ತ್ರೀವಾದ ಸ್ತ್ರೀಯರ ಬದುಕು ಹಾಗೂ ಯೋಚನೆಗಳನ್ನು ಎಷ್ಟರ ಮಟ್ಟಿಗೆ ಬದಲಾಯಿಸಿದೆಯೆಂದರೆ ಬಹುಶಃ ಈಗಿನ ಸ್ಥಿತಿಯನ್ನು ಹಿಂದಿನದಕ್ಕೆ ತಿರುಗಿಸಲು ಸಾಧ್ಯವೇ ಇಲ್ಲ.. ಪ್ರಾರಂಭದಲ್ಲಿ ಬಿಳಿಯ ಹೆಂಗಸರು ಹಾಗೂ ದುಡಿಯುವ ಮಹಿಳೆಯರಿಗಷ್ಟೇ ಸೀಮಿತವಾಗಿದ್ದ ಎರಡನೆಯ ಮಹಿಳಾ ಚಳುವಳಿಯ ಅಲೆಯು 70 ಹಾಗೂ 80ರ ದಶಕದಲ್ಲಿ ದೃಷ್ಟಿಕೋನ ಹಾಗೂ ಸದಸ್ಯತ್ವದಲ್ಲಿ ಸಹ ಮಹಿಳಾ ಚಳುವಳಿಯು ಎಲ್ಲಾ ಮಹಿಳೆಯರನ್ನು ಒಳಗೊಳ್ಳುವ ಪ್ರಯತ್ನವನ್ನು ಮಾಡತೊಡಗಿತು. ಇದೇ ಸಂದರ್ಭದಲ್ಲಿ ಲೆಸ್‌ಬಿಯನಿಸಂ ಕೂಡಾ ತಲೆಯೆತ್ತಿ ಹಲವಾರು ರೀತಿಯ ಬೇಡಿಕೆಗಳನ್ನು ಇಡತೊಡಗಿತ್ತು. ದುಡಿಯುವ ಮಹಿಳೆಯರು ಸಮಾನ ವೇತನ, ಹಾಗೂ ಕಾರ್ಮಿಕ

ಸಂಘಟನೆ, ದುಡಿಯುವ ಸ್ಥಳಗಳಲ್ಲಿ ಸಮಾನ ಗೌರವದ ಬೇಡಿಕೆಗಳನ್ನು ಇಡತೊಡಗಿದ್ದರು. ಎರಡನೆಯ ಮಹಿಳಾ ಚಳುವಳಿಯ ಅಲೆಯು ಎಲ್ಲಾ ಚಳುವಳಿಯ ವಿಭಾಗಗಳೊಂದಿಗೆ ನಿಕಟವಾದ ಸಂಬಂಧಗಳನ್ನು ಇಟ್ಟುಕೊಂಡು ಜನಾಂಗ ದ್ವೇಷ, ಲೈಂಗಿಕ ವಿಭಿನ್ನತೆಗಳ ಬಗ್ಗೆ ಸೂಕ್ಷ್ಮವಾದ ದೃಷ್ಟಿಕೋನವನ್ನು ಮಹಿಳಾ ಚಳುವಳಿಯ ಒಳಗೇ ಬೆಳಸಿತು.

ಚಳುವಳಿಯಿಂದ ವಿಚಾರದತ್ತ :

1960ರಿಂದ 1970ರವರೆಗೆ ಮಹಿಳಾ ಚಳುವಳಿ ಸಂಭ್ರಮಿಸುತ್ತಿದ್ದ ಕಾಲ. 80 ರಿಂದ90ರ ಅವಧಿಯಲ್ಲಿ ಎಲ್ಲಾ ವರ್ಗಗಳಲ್ಲಿ ಸ್ತ್ರೀವಾದದ ನೆಲೆ ಕಾಣಿಸತೊಡಗಿತ್ತು. ಇಂದು ಅನೇಕ ಸಾಂಸ್ಕೃತಿಕ ರಾಜಕೀಯ ಗುಂಪುಗಳೂ ಕೂಡಾ ಸ್ತ್ರೀವಾದದ ವಿಚಾರಗಳನ್ನು ಬಳಸಿಕೊಂಡೇ ಕೆಲಸ ಮಾಡುತ್ತಿವೆ.

ರಾಷ್ಟ್ರೀಯ ನೆಲೆಯಲ್ಲಿ ಮಹಿಳಾ ಆಯೋಗಗಳು ನೇಮಕಗೊಂಡಿವೆ. ಪರಿಸರದ ಕೆಲಸ ಮಾಡುವ ಗುಂಪುಗಳಿವೆ. ವರ್ಣಭೇದದ ಬಗ್ಗೆ, ಮಹಿಳೆಯರ ಆರೋಗ್ಯದ ಬಗ್ಗೆ ಕೆಲಸ ಮಾಡುವ ಗುಂಪುಗಳೂ ಇವೆ. ಹೀಗಿದ್ದಾಗ್ಯೂ ಮಹಿಳಾ ಚಳುವಳಿ ಮುಖ್ಯವಾದ ನೆಲೆಯಲ್ಲಿ ಗ್ರಾಸ್‌ರೂಟ್ ಚಳುವಳಿಯಾಗಿ ಕಾಣಿಸಿಕೊಳ್ಳುತ್ತಿಲ್ಲ. ಸ್ತ್ರೀವಾದದ ಬಗ್ಗೆಗಿನ ಸಾರ್ವಜನಿಕರ ಅಭಿಪ್ರಾಯಗಳು ಈಗ ಸಂಬಳ ತೆಗೆದುಕೊಂಡು ನಡೆಸುವ ಸಂಘಟನೆಗಳಿಂದ ರೂಪಿತಗೊಳ್ಳುತ್ತಿವೆ. ಸರ್ಕಾರದ ಅಧಿಕಾರಿಗಳಿಂದ ರೂಪಿತಗೊಳ್ಳುತ್ತಿವೆ. ಸಂಶೋಧನಾ ವಲಯಗಳಲ್ಲಿ, ಅಕ್ಯಾಡಮಿಗಳಲ್ಲಿ ಪ್ರಕಟವಾಗುವ ಪುಸ್ತಕಗಳಿಂದ ರೂಪಿತಗೊಳ್ಳುತ್ತಿವೆ. ಬ್ಯೂರೋಕ್ರೆಟಿಕ್ ಆಗಿರುವ ಮುಖ್ಯ ಮಹಿಳಾ ಸಂಘಟನೆಗಳು, ಜನರಿಂದ ದೂರವಾದ ಸ್ತ್ರೀವಾದ, ವಿಶ್ವವಿದ್ಯಾಲಯಗಳಲ್ಲಿ ಹೆಚ್ಚಾಗಿರುವ ಸ್ತ್ರೀವಾದವನ್ನು ಇಂದು ಬಹುತೇಕ ಜನರು ಒಪ್ಪಿಕೊಳ್ಳುತ್ತಿದ್ದಾರೆ. ಈ ಬದಲಾವಣೆಗಳು ಚಳುವಳಿಗೆ ಪೂರಕವಾಗಿಲ್ಲ. ಈ ಬದಲಾವಣೆಗಳೊಂದಿಗೆ ಸ್ತ್ರೀವಾದ ಸಾಂಸ್ಥಿಕ ರೂಪ ಪಡೆಯುತ್ತಿರುವುದಲ್ಲದೇ, ಮೂಲೆಗುಂಪಾಗತೊಡಗಿದೆ. ಪದಗಳಲ್ಲಿ ಒಪ್ಪಿತವಾಗಿರುವ ಸ್ತ್ರೀವಾದ ಸ್ಪಿರಿಟ್‌ನಲ್ಲಿ ಗಾಳಿಗೆ ಹಾರಿಹೋದಂತಾಗಿದೆ.

ಸ್ತ್ರೀವಾದಿ ಕ್ರಿಯಾಶೀಲತೆ ಕುಗ್ಗಿಲ್ಲ ಅಥವಾ ಕಾರ್ಯಕರ್ತೆಯರ ಸಂಖ್ಯೆ ಕಡಿಮೆಯಾಗಿಲ್ಲ. ಸ್ತ್ರೀವಾದಿ ಚಿಂತನೆ, ಚರ್ಚೆಯೂ ಕಡಿಮೆಯಾಗಿಲ್ಲ. ಅಮೇರಿಕಾದ ಮಿಲಿಯಾಂತರ ಮಹಿಳೆಯರು ಸ್ತ್ರೀವಾದಿ ಕಾಳಜಿಗಳ ಬಗ್ಗೆ ಮಾತನಾಡುತ್ತಾರೆ. ಅನೇಕ ಸ್ತ್ರೀವಾದಿ ಯೋಜನೆಗಳು ಕೌಟಂಬಿಕ ಹಿಂಸೆಯ ಬಗ್ಗೆ ಮಾತನಾಡುತ್ತಿವೆ. ಮರು ಉತ್ಪಾದನಾ ಹಕ್ಕುಗಳ ಬಗ್ಗೆ, ಮಹಿಳೆಯರ ಆರೋಗ್ಯದ ಬಗ್ಗೆ ಸ್ತ್ರೀವಾದಿ ನೆಲೆಯಲ್ಲಿಯೇ ಹೋರಾಡುತ್ತಿವೆ. ಯುವ ಸ್ತ್ರೀ ವಾದಿಗಳು ಪುಸ್ತಕಗಳನ್ನು ಪ್ರಕಟಿಸಿ ತಮ್ಮ ಜನಾಂಗಗಳ ಧ್ವನಿ ಪ್ರತಿ ಧ್ವನಿಸಲು ಪ್ರಯತ್ನಿಸುತ್ತಿದ್ದಾರೆ.

ಆದಾಗ್ಯೂ ಮಹಿಳಾ ಚಳುವಳಿ ಇಳಿಮುಖವಾಗಿದೆ. ಸ್ತ್ರೀವಾದ ಈಗಿನ ಗುಂಪುಗಳ ಅರ್ಥದಲ್ಲಿ ಒಂದು ಮುಖ್ಯ ಅಂಶ. ಬ್ಯೂರೋಕ್ರಟಿಕ್ ಆಗಿರುವ ಸಂಘಟನೆಗಳು, ವಿಶ್ವ ವಿದ್ಯಾಲಯಗಳು ಸ್ತ್ರೀವಾದಿ ಚಿಂತನೆಗಳನ್ನು ಮಾತ್ರ ಬಳಸಿಕೊಳ್ಳುತ್ತಾರೆ. ಆದರೆ ಕ್ರಿಯಾಶೀಲತೆಯನ್ನು ಬಡಿದೆಬ್ಬಿಸುವುದಿಲ್ಲ. ಹಾಗಾಗಿಯೇ ಸ್ತ್ರೀವಾದ ಒಂದು ವಿಚಾರವಾಗಿದೆಯೇ ಹೊರತು ಅದು ಚಳುವಳಿಯಾಗಿಲ್ಲ. ಚಳುವಳಿಯಲ್ಲಿದ್ದ 'ವಿಷನ್' ಈಗ ಉಳಿದಿಲ್ಲ. ಇದು ಎಡಪಂಥೀಯ ಪಕ್ಷಗಳ ಸ್ಥಿತಿಗೂ ಅನ್ವಯಿಸುತ್ತದೆ. ಸ್ತ್ರೀವಾದಿ ವಿಚಾರಗಳು ಒಪ್ಪಿತವಾಗಿ ಇದ್ದು ಬಿಟ್ಟವೆ ಎನ್ನುವಂತಹ ದೃಷ್ಟಿಕೋನ ಕಂಡು ಬರುತ್ತಿವೆ. ಸ್ತ್ರೀವಾದಿ ಹಾಗೂ ಇತರೇ ಗುಂಪುಗಳಲ್ಲಿ ಕೂಡಾ ಒಂದು ರೀತಿಯ ಸ್ಥಗಿತತೆ ಕಂಡು ಬರುತ್ತಿದೆ. ಬಂಡವಾಳಶಾಹಿತ್ವಕ್ಕೆ ಪರ್ಯಾಯವೇ ಇಲ್ಲ ಎನ್ನುವ ರೀತಿಯ ಭಾವನೆ ಬಹುತೇಕ ಜನರಲ್ಲಿ ಬೇರುಬಿಡತೊಡಗಿದೆ. ಎಡಪಂಥೀಯರ ಚಳುವಳಿಗಳ ಕುಂಠಿತ ಬೆಳವಣಿಗೆಯೇ ಇದಕ್ಕೆ ಮುಖ್ಯ ಕಾರಣವಾಗಿದೆ. ಒಗ್ಗೂಡಿದ ಚಳುವಳಿ, ಸಾಮಾಜಿಕ ಬದಲಾವಣೆ ತರಬಹುದು ಎಂಬುದರ ಬಗ್ಗೆಗಿನ ನಂಬಿಕೆಗಳು ಕಡಿಮೆಯಾಗುತ್ತಾ ಹೋದ ಹಾಗೆ ಸ್ತ್ರೀವಾದಿ ಚಳುವಳಿ ಕೂಡಾ ಕುಂಠಿತವಾಗಿ ಸಾಗಿದೆ.

ಮಹಿಳಾ ಚಳುವಳಿ ಕುಂಠಿತವಾಗುತ್ತಿರುವುದು ಏಕೆ?

1960 ಹಾಗೂ 70 ದಶಕದ ಪ್ರಥಮದಲ್ಲಿ ರ್‍ಯಾಡಿಕಲ್ ಸ್ತ್ರೀವಾದ ಹೆಚ್ಚು ಪ್ರವರ್ಧಮಾನವಾಗಿತ್ತು. ಜೊತೆಗೆ ಸಮಾಜವಾದಿ ಸ್ತ್ರೀವಾದ. ಇವರೆಡೂ ಸ್ತ್ರೀವಾದಿ ಪ್ರತಿಪಾದಕರು ವೈಯಕ್ತಿಕ ಹಾಗೂ ಸಾರ್ವಜನಿಕ

ಕ್ಷೇತ್ರದಲ್ಲಿನ ಮಹಿಳಾ ಅಸಮಾನತೆಗೆ ಒಟ್ಟು ಸಂಬಂಧವಿದೆ ಇವೆರಡನ್ನೂ ಬೇರೆ ಬೇರೆಯಾಗಿಸುವುದು ಸಾಧ್ಯವಿಲ್ಲ ಎಂದೇ ವಾದಿಸಿದರು. ದುಡಿಯುವ ಸ್ಥಳಗಳಲ್ಲಿ ಸಮಾನತೆ ಬೇಕೇ ಬೇಕೆಂದು ವಾದಿಸಿದರು. ಹಾಗಾಗಿ ಭಿನ್ನ ಭಿನ್ನ ನಿಲುವುಗಳನ್ನು ಹೊಂದಿದ್ದಾಗ್ಯೂ ರ್‍ಯಾಡಿಕಲ್ ಹಾಗೂ ಸಮಾಜವಾದ ಸ್ತ್ರೀವಾದಿಗಳು ಒಬ್ಬರಿಗೊಬ್ಬರು ಪೂರಕವಾಗಿಯೇ ಕೆಲಸ ಮಾಡಿದ್ದರು.

ಆದರೆ 1970, 80, 90ರ ದಶಕದ ಆರ್ಥಿಕ ಬೆಳವಣಿಗೆ ವರ್ಗ ಭೇಧವನ್ನು ಹೆಚ್ಚಿನ ರೀತಿಯಲ್ಲಿ ಉಂಟುಮಾಡಿತು. ಹಾಗಾಗಿ ದುಡಿಯುವ ವರ್ಗದ ಮಹಿಳೆಯರೂ ಈ ವರ್ಗ ಭೇದದ ಸ್ತರದಲ್ಲಿ ಅತ್ಯಂತ ಹೆಚ್ಚಾದ ಪೆಟ್ಟನ್ನು ಅನುಭವಿಸಿದರು. ರ್‍ಯಾಡಿಕಲ್ ಸ್ತ್ರೀವಾದಿಗಳ ದೃಷ್ಟಿಕೋನದಲ್ಲಿ ಅನೇಕ ವಿಭಾಗಗಳಾಗಿ, ಗುಂಪುಗಳು ಒಡೆಯತೊಡಗಿದ್ದವು. 1970ರಲ್ಲಿ ಸಾಂಸ್ಕೃತಿಕ ಸ್ತ್ರೀವಾದ ಸ್ತ್ರೀವಾದಿಗಳ ಸಾಂಸ್ಕೃತಿಕ ಬದಲಾವಣೆಗೆ ಮಹತ್ವ ಕೊಟ್ಟಷ್ಟು ಸಾಮಾಜಿಕ ಸಂಬಂಧಗಳನ್ನು ಬದಲಾಯಿಸುವುದಕ್ಕೆ ಮಹತ್ವ ಕೊಡಲಿಲ್ಲ. ಎಲ್ಲಾ ಸ್ತ್ರೀವಾದಿಗಳು ಮಹಿಳಾ ಚಳುವಳಿಯು ಅತಿ ಹೆಚ್ಚಾಗಿದ್ದಾಗ ಕ್ರಾಂತಿ ಇನ್ನೇನು ಆಗಿಯೇ ಬಿಡುತ್ತಿದೆ ಎನ್ನುವ ನಂಬಿಕೆಗಳಲ್ಲಿ ಕೆಲಸ ಮಾಡುತ್ತಿದ್ದರು. ಆದರೆ ಅದು ಆದರ್ಶವಾದಿ ನೆಲೆಯದಾಗಿತ್ತೇ ಹೊರತು ವಾಸ್ತವವಾಗಿ ಸಾಧ್ಯವಾಗಲಿಲ್ಲ. ಹಾಗಾಗಿ 80, 90 ರಲ್ಲಿ ಯುದ್ಧ ಹಾಗೂ ಇತರ ಆರ್ಥಿಕ ಕ್ರೈಸಿಸ್‌ಗಳ ಹಿನ್ನಲೆಯಲ್ಲಿ ಸ್ತ್ರೀವಾದಿ ರಾಜಕೀಯ ತೀರಾ ಸೆಕಂಡರಿ ಆಗುತ್ತಾ ಹೋಗತೊಡಗಿತು. ಎರಡನೇ ಅಲೆಯ ಸ್ತ್ರೀವಾದಿಗಳು ಯುವತಿಯರಾಗಿದ್ದಾಗ ಅವರಲ್ಲಿ ರ್‍ಯಾಡಿಕಲ್ ಆಗಿದ್ದ ವಿಚಾರಗಳಿದ್ದವು, ಹಾಗಾಗಿ ಸ್ತ್ರೀವಾದಿ ದೃಷ್ಟಿಕೋನವನ್ನು ಬೆಳೆಸಲೂ ಅವರಿಗೆ ಸಾಧ್ಯವಾಗಿತ್ತು. ಈಗಿರುವ ಸ್ತ್ರೀವಾದಿ ಗುಂಪುಗಳಲ್ಲಿ ಇರುವವರು ಮಧ್ಯಮ ವಯಸ್ಕರೇ, ಎರಡನೇ ಸ್ತ್ರೀವಾದಿ ಅಲೆಯನ್ನು ಪ್ರಾರಂಭಿಸಿದವರೇ. ವಯಸ್ಸಾದ ಹಾಗೆ ರ್‍ಯಾಡಿಕಲ್ ಯೋಚನೆಗಳು ಕಡಿಮೆಯಾಗುತ್ತವೆ ಎಂದಲ್ಲ. ಆದರೆ ಜನರ ರಾಜಕೀಯ ಅವರ ಸಮಯ ಹಾಗೂ ಅವರು ತಮ್ಮನ್ನು ಯಾವ ರಾಜಕೀಯ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುತ್ತಾರೆ ಎನ್ನುವುದರ ಮೇಲೆ ಅವಲಂಬಿತವಾಗಿರುತ್ತದೆ. ರ್‍ಯಾಡಿಕಲ್ ಆಲೋಚನೆಗಳು ಅಪ್ರಸ್ತುತ ಎಂಬ ಭಾವನೆಯನ್ನು ಯುವತಿಯರಲ್ಲಿ ಮೂಡಿಸುತ್ತಿರುವ ಈ ಸಂದರ್ಭದಲ್ಲಿ ಮಧ್ಯಮ ವಯಸ್ಸಿನ, ಮಧ್ಯಮ ವರ್ಗದವರ ನಾಯಕತ್ವ ಹೊಂದಿದ ಚಳುವಳಿ ಸುಲಭವಾಗಿ complacency ಯ ಕಡೆಗೆ ವಾಲುತ್ತದೆ.

ಆದರೆ ಮಹಿಳಾ ಚಳುವಳಿ ಕುಂಠಿತವಾಗುತ್ತಿರುವುದಕ್ಕೆ ಇದೊಂದೇ ಕಾರಣವಲ್ಲ. ಈಗ ಅನೇಕ ಮಹಿಳಾ ಗುಂಪುಗಳು ರಾಷ್ಟ್ರೀಯ ಹಂತದಲ್ಲಿ ತಲೆ ಎತ್ತಿವೆ. ಆದರೆ ಗ್ರಾಸ್‌ರೂಟ್ ಹಂತದಲ್ಲಿ ಕೆಲಸ ಮಾಡುವ ಸಂಸ್ಥೆಗಳಿಲ್ಲ. ಅಂದರೆ ಒಂದು ಕಾಲದಲ್ಲಿ ಸ್ತ್ರೀವಾದ ರ್‍ಯಾಡಿಕಲ್ ಆಗಿ ಮಾಡಿದ ಕೆಲಸವನ್ನು ಮಾಡುವ ಚಳುವಳಿಗಳಿಲ್ಲ. ಮಹಿಳೆಯರ ಶೋಷಣೆಯನ್ನು ಇಡಿಯ ಸಮಾಜದ ಹಂತದಲ್ಲಿ ಇಟ್ಟು ವಿಮರ್ಶಾತ್ಮಕವಾಗಿ ನೋಡುವ ಗುಂಪುಗಳಿಲ್ಲ.

ಹಾಗೆ ರ್‍ಯಾಡಿಕಲ್ ಆಗಿರುವ ಸ್ತ್ರೀವಾದ ಇಂದು ಇದ್ದರೂ ಅದು ವಿಶ್ವವಿದ್ಯಾಲಯಗಳಲ್ಲಿ ಹಾಗೂ ಕೆಲವೇ ಬುದ್ಧಿಜೀವಿಗಳ ನಡುವೆ ಇದೆಯೇ ಹೊರತು ಸಂಘಟನಕಾರರಲ್ಲಿ ಇಲ್ಲ. ಕೆಲವು ಸ್ತ್ರೀವಾದಿಗಳು ಈ ಒಂದು ಕಂದರವನ್ನು ಮುಚ್ಚಲು ಬೌದ್ಧಿಕ ಕೆಲಸದ ಜೊತೆಗೆ, ಗ್ರಾಸ್‌ರೂಟ್ ಹಂತದಲ್ಲಿ ಸಂಘಟನಕಾರರಾಗಿ ಸಹ ಕೆಲಸ ಮಾಡುತ್ತಿದ್ದಾರೆ. ವಿಶ್ವವಿದ್ಯಾಲಯಗಳಲ್ಲಿ ಸ್ತ್ರೀವಾದಿ ಅಧ್ಯಯನ ನಡೆಸುವವರ ಸಂಖ್ಯೆ ಹೆಚ್ಚಾಗಿದ್ದರೂ ಕೂಡಾ ಅವರಿಗೆ ರಾಜಕೀಯ ಅಜೆಂಡಾ ಇರುವುದಿಲ್ಲ. ವಿಶ್ವವಿದ್ಯಾಲಯಗಳ ಮೌಲ್ಯಗಳಲ್ಲಿ ಇವರು ಸಿಕ್ಕಿಹಾಕಿಕೊಂಡು ಬಿಟ್ಟಿರುತ್ತಾರೆ. 1960ರಲ್ಲಿ ಶ್ರೇಣೀಕೃತ ವ್ಯವಸ್ಥೆಯ ಬಗ್ಗೆ ಸ್ತ್ರೀವಾದ ಧ್ವನಿ ಎತ್ತಿತ್ತು. ಆದರೆ ಇಂದು ಅತ್ಯಂತ ಉನ್ನತ ಮಟ್ಟಕ್ಕೇರುವುದರಿಂದ ಲಾಭಗಳಿವೆ ಎನ್ನುವ ಅಂಶ ಮನದಟ್ಟು ಮಾಡಿಕೊಂಡ tendency ಕಂಡು ಬರುತ್ತದೆ. ಮೊದಲನೇ ಸ್ತ್ರೀವಾದಿ ಅಲೆಯ ಹಾಗೆ ಇಂದಿನ ಸ್ತ್ರೀವಾದ ಕೂಡಾ ಮಧ್ಯಮ ವರ್ಗದವರ ದೃಷ್ಟಿಕೋನವನ್ನು ಹೀರಿಕೊಂಡಿದೆ. ವರ್ಗ ವಿಶ್ಲೇಷಣೆಯ ಬಗ್ಗೆಗಿನ ದೃಷ್ಟಿಕೋನ ಬದಲಾವಣೆಯಾಗಿದೆ. ಕಳೆದ ಒಂದು ದಶಕದಿಂದ ಹೆಚ್ಚುತ್ತಿರುವ ಆರ್ಥಿಕ ಅಭದ್ರತೆ ಹಾಗೂ ಆರ್ಥಿಕ ಅಸಮಾನತೆಗಳಲ್ಲಿ ವೈಯಕ್ತಿಕ ಬೆಳವಣಿಗೆಯೇ ಮಧ್ಯಮ ವರ್ಗದ ಮುಖ್ಯ ಗುರಿಯಾಗಿದೆ. ಹೆಚ್ಚು ಜನರಿಗೆ, ವಿಶೇಷವಾಗಿ ಉದ್ಯೋಗಸ್ಥರಿಗೆ ಕೆಲಸ ಒಂದು 'ಧರ್ಮ' ದಂತಾಗಿದೆ. ಮಧ್ಯಮವರ್ಗದ ಸಾಮೂಹಿಕ ಸಾಮಾಜಿಕ ಸ್ತರವೇ ಕಾಣೆಯಾಗತೊಡಗಿದೆ. ಕೆಲಸ ಮಾತ್ರ ನಮ್ಮನ್ನು

ಗುರುತಿಸಿಕೊಳ್ಳುವ ಸಾಧನಗಳಾಗಿವೆ. ದುಡಿಯುವ ಸ್ಥಳಗಳಲ್ಲಿನ 'ಸ್ಪೈಸ್' ಹೆಚ್ಚಾಗಿರುವುದರಿಂದ ಮಹಿಳೆಯರು ಹೆಚ್ಚು ಹೆಚ್ಚು ಭಾರಗಳನ್ನು ಹೊರುವಂತಾಗತೊಡಗಿದೆ. ಇದು ಬರಿಯ ದುಡಿಯುವ ಕ್ಷೇತ್ರದ ಸಮಸ್ಯೆಯಲ್ಲ. ಇಡಿಯ ಸಂಸ್ಕೃತಿಯ ವಾತಾವರಣವೇ ಹಾಗಾಗತೊಡಗಿದೆ. ದೇಶಗಳು ಹೆಚ್ಚು ಹೆಚ್ಚಾಗಿ ವ್ಯಕ್ತಿಗತ ವಾಗುತ್ತಿರುವುದಲ್ಲದೇ, ಸ್ವಾರ್ಥಿಗಳಾಗಿ ತಣ್ಣಗೆ ಪ್ರತಿಕ್ರಿಯಿಸತೊಡಗಿವೆ. ಸ್ತ್ರೀವಾದ ಈ ಸವಾಲನ್ನು ಪ್ರಶ್ನಿಸುತ್ತಿಲ್ಲ. ಸಾಮಾಜಿಕ ಸಮಾನತೆ ಹಾಗೂ ಸಮುದಾಯದ ಪ್ರಶ್ನೆಯನ್ನು ಹಣದ ಯಶಸ್ಸಿನ ಹಿನ್ನಲೆಯಲ್ಲಿ ಮೂಲೆಗುಂಪು ಮಾಡಿದ್ದಾರೆ. ಈ ಬದಲಾವಣೆಯನ್ನು ರ್ಯಾಡಿಕಲ್ ಚಳುವಳಿಗಳಲ್ಲಿ ಭಾಗಿಯಾದವರು ಹೆಚ್ಚಾಗಿ ಗಮನಿಸುತ್ತಾರೆ. ವಿಶ್ವವಿದ್ಯಾಲಯದ ಸ್ತ್ರೀ ವಾದಿಗಳಲ್ಲಿ ಉತ್ತಮ ಸ್ಪೀಚಸ್‌ಗಾಗಿ ಸ್ಪರ್ಧೆ ನಡೆಯುತ್ತಿರುವುದು ಬದಲಾದ ಮೌಲ್ಯಗಳನ್ನು ತಿಳಿಸುತ್ತವೆ. ಸಮಾಜದಲ್ಲಿ ಬದಲಾವಣೆ ಆಗುತ್ತಿರುವ ಸಂದರ್ಭದಲ್ಲಿ ಸ್ತ್ರೀವಾದದ ಚಳುವಳಿಯು ಕೂಡಾ ಬದಲಾಗತೊಡಗಿದೆ. ಸ್ತ್ರೀವಾದಿಗಳು ಸಮಾಜದ ಸ್ತರದಲ್ಲಿ ವೈಯಕ್ತಿಕವಾಗಿ ಉನ್ನತಿಗೇರುವ ಸಂದರ್ಭದಲ್ಲಿ ತಮ್ಮ ದೃಷ್ಟಿಕೋನವನ್ನು ಕಳೆದುಕೊಂಡು ಬಿಡುತ್ತಿದ್ದಾರೆ. 60 ರ ದಶಕದ ಸ್ತ್ರೀವಾದ ಮಧ್ಯಮವರ್ಗದ ಯುವತಿಯರು ಕಾರ್ಪೋರೇಟ್ ಸೆಕ್ಟರ್‌ಗಳ ವಿರುದ್ಧ, ಮನೆಗೆಲಸಕ್ಕೇ ಸೀಮಿತವಾಗುವುದರ ವಿರುದ್ಧ, ಮನೆಯಿಂದ ಹೊರಗೆ ತಮ್ಮ ವ್ಯಕ್ತಿತ್ವ ರೂಪಿಸುವುದಕ್ಕೆ ಹೋರಾಡುವುದರ ಫಲವಾಗಿತ್ತು. ಎಡಪಂಥೀಯ ಚಳುವಳಿಯ ದೃಷ್ಟಿಕೋನ ಹಂಚಿಕೊಂಡರೂ, ಮಹಿಳೆಯರ ವಿಚಾರದಲ್ಲಿನ ಅವರ ಸೀಮಿತ ನಿಲುವುಗಳನ್ನು ಪ್ರಶ್ನಿಸುವುದಾಗಿತ್ತು. ಎಡಪಂಥೀಯ ಚಳುವಳಿಗಳೂ ಬಲವಾಗಿದ್ದು, ಪ್ರಭುತ್ವ, ಕಾರ್ಪೋರೇಟ್ ಸೆಕ್ಟರ್‌ಗಳನ್ನು ಪ್ರಶ್ನಿಸುತ್ತಿದ್ದವು. ಆದರೆ ಇವೆಲ್ಲದರ ಅನುಪಸ್ಥಿತಿಯಲ್ಲಿ ಇಂದು ಮಹಿಳಾ ಚಳುವಳಿಯ ರ್ಯಾಡಿಕಲ್ ದೃಷ್ಟಿಕೋನ ಮರೆಯಾಗಿ, ಬರಿಯ 'ಕ್ಯರಿಯರ್ ಓರಿಯೆಂಟೆಡ್' ದೃಷ್ಟಿಕೋನಗಳು ಕಂಡು ಬರತೊಡಗಿವೆ.

ಬಹುಶಃ ಈ ಸಂದರ್ಭದಲ್ಲಿ 1960 ರಲ್ಲಿ ನಡೆದ ರ್ಯಾಡಿಕಲ್ ಮಹಿಳಾ ಚಳುವಳಿಯ ಪರಿಷ್ಕೃತ ಚಳುವಳಿ ನಮಗಿಂದು ಬೇಕಾಗಿದೆ. ಈ ಚಳುವಳಿ ಸಮಾಜವಾದಿ ಹಾಗೂ ಸ್ತ್ರೀವಾದಿ ದೃಷ್ಟಿಕೋನವೆರಡನ್ನೂ ಒಳಗೊಂಡು ಇಂದು ಬೆಳೆಯುತ್ತಿರುವ ಕಾರ್ಪೋರೇಟ್ ಸೆಕ್ಟರ್ ಹಾಗೂ ಮಾರ್ಕೆಟ್ ಮೌಲ್ಯಗಳನ್ನು ಪ್ರಶ್ನಿಸಬೇಕಾಗಿದೆ. ಅನೇಕ ಸ್ತ್ರೀವಾದಿಗಳು ವೈಯಕ್ತಿಕ ಬೆಳವಣಿಗೆ, ಯಶಸ್ಸಿನ ದೃಷ್ಟಿಕೋನಗಳನ್ನು ಬಿಟ್ಟು ಬಿಡಬೇಕಾಗಿದೆ. ಹೇಗಿದ್ದರೂ ನಾವು ಬದುಕುತ್ತಿರುವುದು ಈ ಮೌಲ್ಯಗಳ ನಡುವೆಯೇ. ನಾವು ನಮ್ಮ ಕೆಲಸಗಳಲ್ಲಿ ಸಾಧಿಸುವ ಯಶಸ್ಸಿನಿಂದ ನಮ್ಮ ಮೌಲ್ಯವನ್ನು ನಾವು ನಿರ್ಧರಿಸುತ್ತೇವೆ. ಈ ಹಂತದಲ್ಲಿ ಯಾವುದು ಅಡೆ-ತಡೆಯಾಗುವುದನ್ನೂ ನಾವು ಸಹಿಸುವುದಿಲ್ಲ. ಕೆಲಸದ ಸಹಾಯದಿಂದ ಸಂಪತ್ತು ಹಾಗೂ ಗೌರವ, ಘನತೆ ಸಾಧಿಸುವುದೇ ನಮ್ಮ ಜೀವನದ ಯಶಸ್ಸು ಎಂದು ಭಾವಿಸುತ್ತೇವೆ. ಮಧ್ಯಮ ವರ್ಗದ 'ಉದ್ಯೋಗಿ'ಗಳಲ್ಲಿ ಈ ಮೌಲ್ಯಗಳು ಬೇರೂರಿರುವುದನ್ನು ನಾವು ಕಾಣುತ್ತೇವೆ. ಆರ್ಥಿಕ ಅಭದ್ರತೆ, ಹಿಂದುಳಿದು ಬಿಡುವ ಭಯ, ಕೆಲಸ ಕಳೆದುಕೊಳ್ಳುವ ಆತಂಕ, ಕೆಳಕ್ಕೆ ಬಿದ್ದು ಬಿಡುವ ಭಯದಿಂದಾಗಿ ಈ ಮೌಲ್ಯಗಳು ಹೆಚ್ಚು ಹೆಚ್ಚಾಗಿ ಪ್ರಕಟಗೊಳ್ಳತೊಡಗಿವೆ.

ಅತ್ಯಂತ ರ್ಯಾಡಿಕಲ್ ಆಗಿರುವವರಿಗೂ ಈ ಮೌಲ್ಯಗಳಿಂದ ಬೇರೆಯಾಗಿ ಬದುಕಲು ಕಷ್ಟವಾಗುತ್ತದೆ. ಏಕೆಂದರೆ ಭಿನ್ನ ಮೌಲ್ಯಗಳಿಂದ ಕೆಲಸ ಮಾಡುವ ಸಂಸ್ಥೆಗಳು, ಸಾಮಾಜಿಕ ಸಂಬಂಧಗಳು ಬಲಹೀನವಾದಾಗ ಕೆಲಸದಲ್ಲಿ ಉನ್ನತಿ ಸಾಧಿಸುವುದೇ ಹೆಚ್ಚು ಗಣನೀಯ ಮೌಲ್ಯವಾಗಿ ಕಾಣಿಸತೊಡಗಿದೆ. ನಮ್ಮ ಸಮುದಾಯಗಳು ಕಾಣೆಯಾಗುತ್ತಿವೆ. ಇದು ದುಃಖದ ಸಂಗತಿಯೇ, ಆದರೆ ನಾವು ಹೆಚ್ಚು ಹೆಚ್ಚು ನಮ್ಮ ಕೆಲಸಗಳಲ್ಲಿ ತೊಡಗಿಸಿಕೊಳ್ಳುವುದನ್ನು ಕಲಿಯುತ್ತಿದ್ದೇವೆ. ಇದೆಲ್ಲದರ ಬಗ್ಗೆಗಿನ ವಿಮರ್ಶೆ ಅಗತ್ಯ. ಇದೆಲ್ಲಕ್ಕೆ ಪರ್ಯಾಯ ಅಗತ್ಯ. ಬೆಳೆಯುತ್ತಿರುವ ಬಂಡವಾಳ ಶಾಹಿ ಸಮಾಜ ಸಾಮಾಜಿಕ ವರ್ಗಗಳನ್ನು ಹೆಚ್ಚು ಮಾಡತೊಡಗಿದೆ, ಎಲ್ಲದರ ಮೇಲೆ ತನ್ನ ಬೆಲೆಯನ್ನು ಹೇರತೊಡಗಿದೆ. ಜೀವನದ ಎಲ್ಲ ಕ್ಷೇತ್ರ ಹರವುಗಳನ್ನು ತನ್ನೊಳಕ್ಕೆ ಬಲವಾಗಿ ಎಳೆದುಕೊಂಡಿದೆ. ಸ್ತ್ರೀವಾದ ರ್ಯಾಡಿಕಲ್ ಆಗಿ ಇಟ್ಟ ಸಮಾನತೆ ಹಾಗೂ ಸಮುದಾಯದ ಬೇಡಿಕೆಗಳು ಇಂದು ಅಗತ್ಯವಾಗಿವೆ, ಅಥವಾ ಇವುಗಳು ಇಂದು ಏನೇ ರ್ಯಾಡಿಕಲ್ ಪ್ರೊಗ್ರಾಂ ಮಾಡುವುದಕ್ಕೂ ಅಗತ್ಯವಾಗಿರುವ ಸಂದರ್ಭಗಳಾಗಿವೆ.

- ಕನ್ನಡಕ್ಕೆ ಚಂಪಾ

# ಉಸಿರಿತ್ತ ಗಾಳಿಗೆ ಕಂಪಾಗುವುದು

ಬೆಳಿಗ್ಗೆ ೧೦ ರಿಂದ ಒಂದೇ ಸಮನೆ ಕಂಪ್ಯೂಟರ್ ಮುಂದೆ ಕೂತು ಕೆಲಸ ಮಾಡುತ್ತಿದ್ದ ಶಾಂತಿಯ ಕುತ್ತಿಗೆ ನರಗಳು ಪಟಗುಟ್ಟುತ್ತಿದ್ದವು. ಮಾಡುತ್ತಿದ್ದ ಸ್ಟೇಟ್‌ಮೆಂಟ್ ಅನ್ನು ಮುಗಿಸಲೇಬೇಕೆಂದು ಪಟ್ಟು ಹಿಡಿದು ಕೀಬೋರ್ಡ್‌ನ ಮೇಲೆ ಬೆರಳಾಡಿಸುತ್ತಿದ್ದಳು. ಮುಗಿಯುವ ಹೊತ್ತಿಗೆ ಕಣ್ಣು ಮಂಜಾಗಿ, ಕೈ ಸೋತು ಹೋದವು. ಕಂಪ್ಯೂಟರ್ ಆರಿಸಿ ಹಾಗೆ ಸೀಟಿನ ಹಿಂದಕ್ಕೆ ಒರಗಿದಳು, ಕೈ ಅಗಲಿಸಿ ಹಾಗೆ ನಿಧಾನವಾಗಿ ಮೈಮುರಿಯಬೇಕೆಂದು ಆಸೆಯಾಯ್ತು. ಸುತ್ತಲಿದ್ದವರನ್ನು ಗಮನಿಸಿ, ನಟಿಕೆ ಮುರಿದು ಸುಮ್ಮನಾದಳು. ಉಚ್ಚೆಗೆ ಅವಸರವಾಯ್ತು. ಬೆಳಗ್ಗಿನಿಂದ ಮೇಲೆದ್ದೆ ಇರಲಿಲ್ಲ ಕಿಬ್ಬೊಟ್ಟೆ ಊದಿಕೊಂಡಿತ್ತು. ಕಂಪ್ಯೂಟರ್‌ಗೆ ಕವರ್ ಹಾಕಿ, ಡ್ರಾಯರ್‌ಗೆ ಬೀಗಹಾಕಿ, ಟಾಯ್ಲೆಟ್‌ಗೆ ಹೋದಳು. ಹೋಗಿ ಕೂತಾಗ ಹಾಯೆನಿಸಿತು. ಆರಾಮವಾಗಿ ಕೂತು ಸುತ್ತ ಕಣ್ಣಾಡಿಸಿದಳು. ದೊಡ್ಡ ಟಾಯ್ಲೆಟ್‌ನಲ್ಲಿ ಒಂದೂ ಮೆಶಿನ್ ಇರಲಿಲ್ಲ. ಮೆಶಿನ್ನುಗಳೇ ತುಂಬಿರುವ ಆಫೀಸಿಗಿಂತ ಟಾಯ್ಲೆಟ್ ಚೆನ್ನಾಗಿದೆ ಅನಿಸಿತು. ಉಚ್ಚೆ ಮಾಡಿದ ಮೇಲೆ ಹಾಯೆನಿಸಿತು. ವಾಚ್ ನೋಡಿಕೊಂಡಳು, ಗಂಟೆ ಆಗಲೇ 5-40, 5-45 ರ ಪುಷ್ಪಕ್ ಹಿಡಿಯಬೇಕೆಂದರೆ ಇನ್ನೈದು ನಿಮಿಷದಲ್ಲಿ ಬಸ್‌ಸ್ಟಾಪ್‌ನಲ್ಲಿರಬೇಕು. ದಡದಡ ಹೊರಟು ಆಫೀಸ್‌ಗೇಟ್ ಮುಟ್ಟುವಾಗಲೆ ಪುಷ್ಪಕ್ ಹಾದು ಹೋಯಿತು. ಛೇ ಅಂದುಕೊಳ್ಳುವಾಗಲೆ ಸಿಗ್ನಲ್ ಲೈಟ್ ಬಿದ್ದು ಬಸ್ ನಿಂತಿತು. ಒಂದೇ ಉಸಿರಿಗೆ ಓಡಿ ಬಸ್ ಹತ್ತಿದಳು. ಏದುಸಿರು ಬಿಡುತ್ತಲೆ ಜನ ಜಂಗುಳಿಯಲ್ಲಿ ನುಗ್ಗಿ ಕೊಂಚ ಜಾಗ ಮಾಡಿಕೊಂಡು ನಿಂತಳು. ಒಂದಿಂಚೂ ಅಲ್ಲಾಡದೆ ಕೋಣಗಳಂತೆ ನಿಂತ ಗಂಡಸರನ್ನ ನೋಡಿ ಸಿಟ್ಟುಬಂತು ಶಾಂತಿಗೆ. ಎಷ್ಟೇ ಕೊಸರಾಡಿದರೂ, ಥೂ, ಛೆ ಎಂದರೂ ಏನೂ ತಟ್ಟದೆ ನಿಲ್ಲುವ ಗಂಡಸರು! ಜಾಡಿಸಿ ಒದೆಯಬೇಕೆನಿಸಿ ಕಟಕಟನೆ ಹಲ್ಲು ಕಡಿದಳು. ಈ ರೀತಿ ಹಲ್ಲು ಕಟಗುಟ್ಟಲು ಶುರುವಾಗಿ 14 ವರ್ಷವಾಯಿತಲ್ಲ ಎಂದು ನೆನಪಾದೊಡನೆ ಪಿಚ್ಚೆನಿಸಿತು.

ಬಸ್ಸಿಳಿದು ತರಕಾರಿ ಕೊಳ್ಳಲು ಅಂಗಡಿಗೆ ಹೋದಳು, ನಿತ್ಯವೂ ಹೋಗುವ ತರಕಾರಿ ಅಂಗಡಿ, ಅದೇ ಬದನೆಕಾಯಿ, ಆಲೂಗಡ್ಡೆ, ಕೋಸು, ಈರೆಕಾಯಿ, ಪಡವಲಕಾಯಿ....... ತರಕಾರಿ ತಗೊಂಡು ಹೋಗಿ ಅಡುಗೆ ಮಾಡು ಊಟಮಾಡು ಪಾತ್ರೆ ತೊಳಿ ಮತ್ತೆ ತರಕಾರಿ, ಅಡುಗೆ ಪಾತ್ರೆ....... ಏನೋ ಒಂದು ತರಕಾರಿ ತಗೊಂಡು ಮನೆಗೆ ಬರುವ ವೇಳೆಗೆ ಕುತ್ತಿಗೆ ನರಗಳು ಕುಯ್ಯಲು ಶುರು ಮಾಡಿದವು. ಬೀಗ ತೆಗೆದು ಮನೆಯೊಳಗೆ ಕಾಲಿಟ್ಟ ಕೂಡಲೆ ಫೋನ್ ರಿಂಗಾಯಿತು. ಸಿಟ್ಟು ಬಂದು ತಲೆ ಕೆಟ್ಟಂತಾಯಿತು. ರಿಸೀವರ್ ತೆಗೆದುಕೊಂಡಳು. Is that shanthi speaking ಎಂಬ ಮಂಜುಳವಾಣಿಗೆ ಇನ್ನಷ್ಟು irritate ಆಗಿ ಶಾಂತಿ ಅಲ್ಲ, ಪೀಡೆ ಅಂತ ಫೋನ್ ಕುಕ್ಕಿದಳು. ಯಾವ ಬೋಳಿಮಗ ಶಾಂತಿ ಎಂಬ ಹೆಸರು ಸೂಚಿಸಿ ಜಾತಕ ಬರೆದ?

ಏನೂ ಮಾಡಲು ಮನಸ್ಸಾಗದೆ ಹಾಗೆ ನೆಲದ ಮೇಲೆ ಅಡ್ಡಾದಳು, ಕೂದಲಿಗೆ ಹಾಕಿದ ಕ್ಲಿಪ್ ಒತ್ತಿತ್ತು. ಕ್ಲಿಪ್ ಕಿತ್ತು ರೊಯ್ಯನೆ ಎಸೆದಳು. ಹಾಗೇ ಅಡ್ಡಾಗಿ ಸುತ್ತಾ ಕಣ್ಣಾಡಿಸಿದಳು, ಇರುವ ಒಂದೇ ಕೋಣೆಯಲ್ಲಿ ಒಂದ್ಕಡೆ ಮಂಚ ಇನ್ನೊಂದ್ಕಡೆ ಟೇಬಲ್, ಮತ್ತೊಂದ್ಕಡೆ ಶೆಲ್ಫ್. ಹಾಸಿಗೆ ಮೇಲೆ ಪುಸ್ತಕ, ಟೇಬಲ್ ಮೇಲೆ ಪುಸ್ತಕ, ಶೆಲ್ಫ್‌ನಲ್ಲಿ ಪುಸ್ತಕ, ಪೇಪರ್‌ಗಳು, ಪತ್ರಗಳು. ಸತ್ರೆ ಆರಾಮವಾಗಿ ಸುಟ್ ಹಾಕಬೋದು. ಸರಿಯಾಗಿ ಮುಚ್ಚೋದಕ್ಕೆ ಆಗದಂಗೆ ತುಂಬಿರೊ ವಾರ್ಡ್‌ರೋಬ್, ಮಾಸಲಾಗಿರೊ ಕರ್ಟನ್, ಫ್ರೇಂ ಹಾಕಿದ ಕೊಲಾಜ್ ಚಿತ್ರ ಎಲ್ಲಾ ಹಾಗೆ ಇದೆ 15 ವರ್ಷಗಳಿಂದ ಜಿಗುಪ್ಸೆಯಾಗತೊಡಗಿತು, ಅಳಬೇಕೆನಿಸಿತು. ಮುಸಿಮುಸಿ ಎಂದು ಪ್ರಾರಂಭಿಸಿ, ಜೋರಾಗಿ ಗೋಳಾಡುತ್ತ ಬಿಕ್ಕುವುದು ಅದೂ ಮಾಮೂಲಿ ಅಲ್ಲವ ಎನಿಸಿ ಗಪ್ ಎಂದು ಸುಮ್ಮನಾದಳು.

ಎಲ್ಲವನ್ನು ಬದಲಾಯಿಸಿ ಹೊಸದೇನಾದರೂ ಮಾಡಿದರೆ ಹೇಗೆಂದು ಯೋಚಿಸಿದಳು.

ಫ್ರೇಂ ಹಾಕಿರುವ ಕೊಲಾಜ್ ಕಿತ್ತೆಸೆದು ಮಂಚದ ಹಿಂದಿನ ಇಡೀ ಗೋಡೆಯ ಮೇಲೆ ಕೊಲಾಜ್ ಮಾಡಿದರೆ?

ಮಾಸಲು ಕರ್ಟನ್ ತೆಗೆದು ನೀಲಿ ಬಟ್ಟೆಯ ಮೇಲೆ ಬೆಳ್ಳಿಂಚಿನ ಬಳ್ಳಿಯನ್ನು ಪೇಂಟ್ ಮಾಡಿದರೆ?

ಶೆಲ್ಫ್ ಅನ್ನು ಬಿಸಾಡಿ, ಆ ಜಾಗದಲ್ಲಿ ಪುಟಾಣಿ ನಾಯಿಮರಿಗಳು ಪುಟ್ಟ ಹುಡುಗನ ಮೇಲೆ ಬಿದ್ದು ಕಚಗುಳಿ ಇಡುತ್ತಿರುವ "If you love some one show it off" ದೊಡ್ಡ ಪೋಸ್ಟರ್ ಅನ್ನು ಅಂಟಿಸಿದರೆ?

ಯಾವುದೂ ಬೇಡವೆನಿಸಿತು ಶಾಂತಿಗೆ. ಅಲ್ಪಸ್ವಲ್ಪ ಬದಲಾಯಿಸಿಕೊಂಡು, ಕೊಂಚ ಅಡ್ಜಸ್ಟ್ ಮಾಡಿಕೊಂಡು, ಹಳಸಲಿಗೆ ಒಗ್ಗರಿಸಿಕೊಂಡು ಮತ್ತೆ ಮತ್ತೆ ಮಾಮೂಲಿಗೆ ಹೊಂದಿಕೊಳ್ಳುತ್ತಾ ಹೋಗುವುದು. Routine life ಸದ್ದಿಲ್ಲದೆ ನಮ್ಮನ್ನು ಪಳಗಿಸುತ್ತ ಸರಪಳಿ ಬಿಗಿಯುತ್ತೆ, ನಾಯಿಯಾಗಿಸುತ್ತೆ.

ಹೊಟ್ಟೆಪಾಡಿಗೆ ದುಡಿಯಲೇಬೇಕು. ದುಡಿಯಲು ಡೀಸೆಂಟ್ ಜಾಬ್ ಬೇಕು, ಡೀಸೆಂಟ್ ಜಾಬ್‌ಗೆ, ಡಿಸೆಂಟ್ ಮನೆ ಅದಕ್ಕೆ ಡಿಸೆಂಟ್ ಫರ್ನಿಚರ್, ಡಿಸೆಂಟ್ ಡ್ರೆಸ್ .... ಕೊನೆಗೆ ಹೊಟ್ಟೆಪಾಡು ಬಿಟ್ಟು ಡೀಸೆನ್ಸಿ ಪಾಡಿಗೆ ದುಡಿಯೋದು. ಹೊಟ್ಟೆಪಾಡಿಗೆ 15,000 ರೂಪಾಯಿಯ ಕೆಲಸ ಬೇಕಾ ? ಎಲ್ಲದಕ್ಕೂ ಕೊನೆ ಹಾಡಿ ಬಿಡುಗಡೆ ಪಡೆಯಬೇಕೆನಿಸಿತು ಶಾಂತಿಗೆ. ಅನಿಸಿದ ಕೂಡಲೆ ಚಂಗನೆ ಎದ್ದು ಕೂತಳು. ಪುಸ್ತಕ, ಪೇಪರ್‌ಗಳನ್ನು ಪರಫರ ಹರಿದಳು. ಕರ್ಟನ್‌ಗಳನ್ನು ಹರಿದು ಸೀಳಿದಳು. ಒಂದೊಂದನ್ನೆ ಹರಿದು, ಮುರಿದು ಎಸೆದಾಡಿದಳು. ಹೊರಗೆ ಹರಡಿದ ಕತ್ತಲೂ ಒಳಗೂ ಹರಿದುಬಂತು. ಕತ್ತಲೊಳಗೆ ಮಿಣುಕು ಬೆಳಕು, ಯಾವಾಗಲೂ ಆರದೇ ಉರಿಯಲೆಂದು ಎಣ್ಣೆತುಂಬಿ ಹಚ್ಚುವ ದೊಡ್ಡ ಮಣ್ಣಿನ ಹಣತೆ ಮೂಲೆಗೂಡಿನಲ್ಲಿ. ಕೈಯಲ್ಲಿದ್ದ ಪೇಪರ್‌ವೇಟ್ ಅನ್ನು ರೊಯ್ಯನೆ ಎಸೆಯಬೇಕೆನಿಸಿತು ಶಾಂತಿಗೆ. ಉರಿಯುವ ಹಣತೆ ಕೆಡಿಸಲು ಕೈ ಮೇಲೆಳಲಿಲ್ಲ. ಬಾಗಿಲಿನ ಕಡೆ ತಿರುಗಿದಳು, ಬಾಗಿಲಿನ ಮೇಲೆಲ್ಲ ಪುಟಾಣಿಗಳು ಬರೆದುಕೊಟ್ಟ ಬಣ್ಣಬಣ್ಣದ ಚಿತ್ರಗಳು ಹರಿದುಹಾಕಲು ಮನಸ್ಸಾಗದೆ ದಢಾರನೆ ಬಾಗಿಲು ತೆಗೆದಳು. ಮಾಮೂಲಿನಂತೆ ಬೀಗದಕೈ ನೆನಪಾಯಿತು. ಬಿಟ್ಟು ಹೊರಟವಳಿಗೆ ಭದ್ರಮಾಡುವ ಚಿಂತೆ ಯಾಕೆ ಎನಿಸಿ ನಗುಬಂತು ಶಾಂತಿಗೆ.

ದಡದಡ ಮೆಟ್ಟಲಿಳಿದು ಬಂದಳು, ಪೋರ್ಟಿಕೊ ಅಡಿಯಲ್ಲಿದ್ದ ಸೈಕಲ್ ನೋಡಿ ಖುಷಿಯಾಯ್ತು. ಹೊಸ ಸೈಕಲ್ ತಗೊಂಡು ಎರಡು ತಿಂಗಳಾಗಿತ್ತು. ನಲವತ್ತು ಸಮೀಪಿಸುತ್ತಿದ್ದವಳು ಸೈಕಲ್ ಕೊಂಡಾಗ ಎಲ್ಲರು ನಕ್ಕಿದ್ದರು. ಶಾಂತಿಗಂತೂ ಕೊಂಚವೂ ನಾಚಿಕೆಯಾಗಿರಲಿಲ್ಲ. ಪುಟ್ಟ ಹುಡುಗಿಯಾಗಿದ್ದಾಗ ಕಂಡ ಸೈಕಲ್ ಕನಸು ನನಸಾದಂತಾಗಿ ಖುಷಿಯಾಗಿತ್ತು. ದೊಡ್ಡ ಮೈದಾನದಲ್ಲಿ ಕಷ್ಟಪಟ್ಟು ಸೈಕಲ್ ಕಲಿತು ಒಬ್ಬಳೆ ತುಳಿದುಕೊಂಡು ಹೋದಾಗ ಎಂಥ ಆನಂದವಾಗಿತ್ತು. ಉಲ್ಲಾಸ ಮೈಯೊಳಗೆಲ್ಲ ಹರಿದಾಡಿ ತೇಲಿದಂತೆ. ಒಂದು ಕೈಬಿಟ್ಟು ಹೊಡೆದಾಗಲಂತೂ ಜಗತ್ತನ್ನೇ ಗೆದ್ದ ಹಮ್ಮು.

ಎಷ್ಟು ದಿನದಿಂದ ಸೈಕಲ್ಲೆ ಮುಟ್ಟಿಲ್ಲವಲ್ಲ ಎಂದು ಸ್ಟ್ಯಾಂಡ್ ತೆಗೆದು ಸೈಕಲ್ ತಿರುಗಿಸಿದರೆ ಎದುರಿಗೆ ಅವಳು! ನಂದ ಬಟ್ಟಲಿನಷ್ಟು ಮೆದುವಾಗಿರುವವಳು. ಇಷ್ಟಗಲದ ತಂಪನೆ ನಗೆ.

ಶಾಂತಿ : ಹೀಗೆ ಎಲ್ಲೊ ಹೊರ್‍ಟಿದೀನಿ ಕಣೆ

ಅವಳು : ಗೊತ್ತು, ಎಲ್ಲಿಗಂತಲೂ ಗೊತ್ತು.

ಶಾಂತಿ : ಎಲ್ಲಿಗೆ?

ಅವಳು : ದಟ್ಟ ಕಾಡಿನೊಳಗೆ ಪಚ್ಚೆಹಸುರಿನ ಮಾವಿನ ಮರದ ಕಂಪಿಗೆ

ಶಾಂತಿ : ನೀನು ಯಾವಗ್ಲೂ ಹಿಂಗೆನೆ; ಬಣಿವೆಯೊಳಗಿನ ಸೂಜಿನ ಅಂಜನ ಹಾಕಿ ನೋಡಿ ಹೇಕ್‌ಬಿಡ್ತಿಯಾ, ಸರಿ ಎಲ್ಲೊ ಒಂದ್ ಕಾಡೊಳಗೆ ಒಂದ್ ಮಾವಿನಮರ, ಆ ಮರದ ಎಲೆಯೊಳಗಿಂದ ತೂಗಾಡೊ ಕಾಯಿಗೆ ಒಂಥರ, ಅದೊಂಥರ ಘಮ, ಕಂಪು ಹೇಗೆ?

ಅವಳು : ಅದನ್ನ ತಿಳ್ಕೊಳೊಕೆ ಮಾವಿನ ಮರವಾಗಬೇಕು.

ಶಾಂತಿ : ಹೆಂಗೆ ಆಗೋದು?

ಅವಳು : ಭೂಮಿಯ ಕಾವಿನೊಳಗೆ ಹೂತು, ಮೊಳಕೆವಡ್ದು, ಬಿಸಿಲಿಗೆ ಬೆಂದು, ಗಾಳಿಗೆ ತಟ್ಟಾಡಿ, ಮಳೆಗೆ ಮುದುರಿ, ನಿಂತು ಬೇರುಬಿಟ್ಟು ಧ್ಯಾನಿಸಿ, ಗಾಳಿ, ಮಳೆ, ಮಣ್ಣು ದಯೆ ತೋರಿದ್ರೆ ಮರವಾಗಿ ಹೂ ತುಂಬಿ, ಕಾಯಾಗಿ ತೂಗಿ ಉಸಿರಿತ್ತ ಗಾಳಿಗೆ ಕಂಪಾಗೋದು. ಹೇಳುತ್ತಾ ಅವಳು ಹರಿದು ಹೋದಳು ಹಿಂದೆ ಶಾಂತಿ ಸೈಕಲ್ ತುಳಿಯುತ್ತಾ ತೇಲಿದಳು.

- ಸರಸ್ವತಿ ಮ.

# "ಜಾತ್ಯಾತೀತ ಶಕ್ತಿಗಳು ಲಿಂಗ ಪ್ರಶ್ನೆಯನ್ನು ಗಂಭೀರವಾಗಿ ಪರಿಗಣಿಸಿಲ್ಲ"

ವಸ್ತುನಿಷ್ಠತೆಗೆ ಹೆಸರಾದ ಖ್ಯಾತ ಇತಿಹಾಸಕಾರರಾದ ಶ್ರೀ ಪಣಿಕ್ಕರ್‌ರವರು ಜೂನ್‌ನಲ್ಲಿ ಬೆಂಗಳೂರಿಗೆ ಬಂದಿದ್ದರು. ಅವರೊಂದಿಗೆ ಸಂವಾದ ಕಾರ್ಯಕ್ರಮವನ್ನು ಪೆಡೆಸ್ಟ್ರಿಯನ್ ಪಿಕ್ಚರ್ಸ್‌ರವರು ಏರ್ಪಡಿಸಿದ್ದರು. ಆ ಸಭೆಯಲ್ಲಿ ಅವರು ಮಾತನಾಡಿದ್ದನ್ನು ನಂತರ ಮಾನಸ ಬಳಗದವರು ಅವರೊಂದಿಗೆ ನಡೆಸಿದ ಮಾತುಕತೆಯನ್ನು ಮಾನಸ ಓದುಗರಿಗಾಗಿ ಪ್ರಕಟಿಸಿದ್ದೇವೆ.

ಮಾನಸ: ಸದ್ಯದ ಅಧ್ಯಕ್ಷೀಯ ಚುನಾವಣೆ ಕುರಿತು ನಿಮ್ಮ ಅಭಿಪ್ರಾಯವೇನು?

ಪಣಿಕ್ಕರ್ : ನಮ್ಮ ದೇಶದ ಅಧ್ಯಕ್ಷೀಯ ಚುನಾವಣೆಯ ಎರಡು ಮುಖ್ಯ ಮೌಲ್ಯಗಳನ್ನಾಧರಿಸಿದೆ. ಅಂತರಿಕವಾಗಿ ವಿವಿಧ ವರ್ಗಗಳ ಸಮಗ್ರತೆ ಮತ್ತು ಬಾಹ್ಯವಾಗಿ ಶಾಂತಿಯನ್ನಾಧರಿಸಿ ನಮ್ಮ ದೇಶ ಕಟ್ಟಲ್ಪಟ್ಟದ್ದು, ಈ ಮೌಲ್ಯಗಳನ್ನು ಅಧ್ಯಕ್ಷೀಯ ಚುನಾವಣೆ ಪ್ರತಿಬಿಂಬಿಸಬೇಕು. ಈ ಮೌಲ್ಯಗಳನ್ನು ಸದ್ಯದ ಚುನಾವಣೆ ಪ್ರತಿಬಿಂಬಿಸಿದೆಯೇ ಎಂಬುದು ಪ್ರಶ್ನಾರ್ಹ. ಬಿ.ಜೆ.ಪಿಗೆ ಈ ಮೌಲ್ಯಗಳ ಕುರಿತು ಕಾಳಜಿ ಇಲ್ಲ. ಕಲಾಂ ಅವರನ್ನು ಆಯ್ಕೆ ಮಾಡಿರುವುದು ತತ್ವ, ಮೌಲ್ಯಗಳ ಆಧಾರದ ಮೇಲೆ ಮತ್ತು ಎಲ್ಲರ ಒಮ್ಮತದಿಂದ ಎನ್ನುವುದಕ್ಕಿಂತ ಇದೊಂದು ಬಿ.ಜೆ.ಪಿಯ ಸ್ಪಷ್ಟವಾದ manipulation. ಎಂತಹ ಸಂದರ್ಭದಲ್ಲಿ ಬಿ.ಜೆ.ಪಿ. ಕಲಾಂ ಅವರನ್ನು ಅಧ್ಯಕ್ಷ ಸ್ಥಾನಕ್ಕೆ ಸೂಚಿಸಿದೆ ಎಂಬುದನ್ನು ಗಮನಿಸಬೇಕು. ಗುಜರಾತಿನ ನರಮೇಧವನ್ನು legitamise ಮಾಡಲು ಮತ್ತು ತನ್ನ ಕೋಮುವಾದಿ ಆಸಕ್ತಿಗಳನ್ನು ಮುಚ್ಚಿಕೊಳ್ಳಲು ಕಲಾಂ ಅವರನ್ನು ಆಯ್ಕೆ ಮಾಡಿದೆ. ವಿಜ್ಞಾನಿಗಳನ್ನು ಅಧ್ಯಕ್ಷ ಪದವಿಗೆ ಆಯ್ಕೆ ಮಾಡುವುದು ತಪ್ಪೇನಲ್ಲ. ಎಂತಹ ವಿಜ್ಞಾನಿಗಳನ್ನು ಮಾಡಬೇಕು? ವಿಜ್ಞಾನ ನೀತಿ, ಮೌಲ್ಯ, ಸಾಮಾಜಿಕ ಹೊಣೆಗಾರಿಕೆಯಿಂದ ಹೊರತಾದುದಲ್ಲ. ವ್ಯವಸಾಯ, ಜೀವಶಾಸ್ತ್ರ, ಸಾಮಾಜಿಕ ವಿಭಾಗಗಳಲ್ಲಿ ಕೆಲಸ ಮಾಡಿದಂತಹ ವಿಜ್ಞಾನಿಗಳು ಸೂಕ್ತ. ಈ ದೃಷ್ಟಿಯಲ್ಲಿ ನೋಡಿದಾಗ ಕಲಾಂ ಅವರೊಬ್ಬರು ತಾಂತ್ರಿಕ ವಿಜ್ಞಾನಿಯುಪ್ಪೇ. ಬಿ.ಜೆ.ಪಿಯು ಭಾರತ ಮತ್ತು ಹಿಂದುಗಳದು ಆಕ್ರಮಣಕಾರಿ ಸಮಾಜ ಎಂಬ image ಅನ್ನು ಜಗತ್ತಿಗೆ ನೀಡಬೇಕೆಂದಿರುವ ಉದ್ದೇಶಕ್ಕೆ ಕಲಾಂ ಅವರು ಮಾತನಾಡುವ ಅಣ್ವಸ್ತ್ರ ಮತ್ತು ಕ್ಷಿಪಣಿಗಳು ಪೂರಕವಾಗಿವೆ. ಅಲ್ಪಸಂಖ್ಯಾತ ಸಮುದಾಯದ ವ್ಯಕ್ತಿಯೊಬ್ಬರು ಅಧ್ಯಕ್ಷರಾಗುವುದು ಸಾಗತಾರ್ಹವಾದರೂ ಈ ಆಯ್ಕೆಯ ಹಿಂದೆ ಯಾವ ತತ್ವ ಮೌಲ್ಯಗಳಿಲ್ಲದಿರುವುದರಿಂದ ಕಲಾಂ ಅವರು unfortunate ಎಂದೇ ಹೇಳಬೇಕು.

ಮಾನಸ: N.A.P.M.(ಜನಾಂದೋಲನಗಳ ರಾಷ್ಟ್ರೀಯ ಮೈತ್ರಿಕೂಟ)ದಂತಹ ಚಳುವಳಿಗಳು ಈಗಿನ ಸಂದರ್ಭಕ್ಕೆ ಹೆಚ್ಚು ಪ್ರಸ್ತುತವೆನಿಸುತ್ತದೆ. ಈ ಬಗ್ಗೆ ತಮ್ಮ ಅಭಿಪ್ರಾಯವೇನು?

ಪಣಿಕ್ಕರ್ : (National alliance for peoples movement) ರಾಷ್ಟ್ರೀಯ ಜನಾಂದೋಲನಗಳ ಸಮನ್ವಯ ಸಮಿತಿ) ನಂತಹ ಚಳುವಳಿ ಮುಖ್ಯವೇ, ಅಲ್ಲಿ ನರ್ಮದಾ ಬಚಾವ್ ಆಂದೋಲನವಷ್ಟೇ ಮುಖ್ಯವಾಗಬಾರದು. ನರ್ಮದಾ ಚಳುವಳಿ ಅಪಾಯಕಾರಿ ಅಭಿವೃದ್ಧಿ ಮಾದರಿಯನ್ನು ಪ್ರಶ್ನಿಸುತ್ತಿರುವುದರಿಂದಲೇ ಅದನ್ನು ಬೆಂಬಲಿಸಬೇಕು. ನಾನೂ ಸಹ ಅನೇಕ ಬಾರಿ ಬೆಂಬಲ ವ್ಯಕ್ತಪಡಿಸಿದ್ದೇನೆ. ಆದರೆ N.A.P.M.ನಲ್ಲಿ ಸ್ಥಳೀಯ ಜನರ ಹೋರಾಟಗಳು ಮುಖ್ಯವಾಗಬೇಕು.

ಮಾನಸ : ಕೋಮುವಾದಿ ವಿರೋಧಿ ವೇದಿಕೆಗಳಲ್ಲಿ ಕಾಂಗ್ರೆಸ್ ಪಕ್ಷವನ್ನೊಳಗೊಳ್ಳುವ ಕುರಿತು ಏನು ಹೇಳುತ್ತೀರಿ?

ನಮ್ಮ ದೇಶದಲ್ಲಿ ಕೋಮುವಾದವನ್ನು ವಿರೋಧಿಸುವ ಬಲವಾದ ಶಕ್ತಿಗಳೆಂದರೆ ಎಡ ಪಕ್ಷಗಳು ಎಂಬುದರಲ್ಲಿ ಅನುಮಾನವಿಲ್ಲ. ಕೋಮುವಾದಕ್ಕೆ ಸಂಬಂಧಪಟ್ಟಂತೆ ಎಲ್ಲಾ ಎಡ ಹಾಗು ರ್‍ಯಾಡಿಕಲ್ ಪಕ್ಷಗಳು ಬಿ.ಜೆ.ಪಿಯೊಂದಿಗೆ ಕಾಂಗ್ರೆಸ್ ಅನ್ನು ಸಮೀಕರಿಸುವುದು ಸರಿಯಲ್ಲ. ಬಿ.ಜೆ.ಪಿಯ ಗುರಿಯೇ ಕೋಮುವಾದಿಯಾಗಿರುವುದು

ಕಾಂಗ್ರೇಸ್ ಮತಕ್ಕಾಗಿ ಕೋಮುವಾದಿಯಾಗಿರುವ ಪ್ರಸಂಗಗಳಿವೆಯೇ ಹೊರತು ಆದರ ಗುರಿ ಕೋಮುವಾದಿಯಾಗಿರುವುದಿಲ್ಲ.

ಪಾರ್ಟಿ ಸದಸ್ಯತ್ವ ಬಯಸದ, ರಾಜಕೀಯ ಆಸಕ್ತಿ ಇಲ್ಲದ ಆದರೆ ಸೆಕ್ಯೂಲರ್ ಆಗಿರುವ ಬಹುದೊಡ್ಡ ಭಾಗ ನಮ್ಮಲ್ಲಿದೆ. ಇವರು ಕಾಂಗ್ರೇಸ್ ಅಥವಾ ಮಾರ್ಕ್ಸ್‌ವಾದಿ ಪಕ್ಷಗಳಿಂದ ಪ್ರಭಾವಿತರಾಗಿರಬಹುದು ಆದರೆ ಅವುಗಳ ಸದಸ್ಯರಲ್ಲ, ಪಕ್ಷದ ಸದಸ್ಯರಲ್ಲದ, ಸರ್ಕಾರೇತರ ಅಥವಾ ಸಂಘಟಿತ ಗುಂಪುಗಳಿಗೆ ಸೇರದ ಕೋಮುವಾದವನ್ನು ವಿರೋಧಿಸುವ ಜನರನ್ನು ತಲುಪುವುದು ಸದ್ಯದ ತುರ್ತಾಗಿದೆ. ಈ ಜನರನ್ನು politisize ಮಾಡುವುದು ಮುಖ್ಯ, ಕೋಮುವಾದ ವಿರೋಧಿಸುವ ವೇದಿಕೆಗಳು ಈ ಜನರನ್ನೊಳಗೊಳ್ಳಬೇಕು.

ಮೈತ್ರಿಕೂಟಗಳಿಗಿಂತ ವಿಷಯಗಳನ್ನಾಧರಿಸಿ ವೇದಿಕೆ ಮಾಡಿಕೊಳ್ಳುವುದು ಸೂಕ್ತ, ಜನಬಲವನ್ನು ಹೊಂದಿರುವ ಕಾಂಗ್ರೇಸ್ ಪಕ್ಷವನ್ನು ಹೆಚ್ಚೆಚ್ಚು ಜಾತ್ಯಾತೀತ ಬಲವನ್ನಾಗಿ ಮಾಡದಿದ್ದರೆ ಅದು ಕೋಮುವಾದಿ ಅಂಶಗಳಿಲ್ಲ, ಅದು ಸಂಪೂರ್ಣ ಜಾತ್ಯಾತೀತ ಪಕ್ಷವೆಂದು ನಾನು ಹೇಳುತ್ತಿಲ್ಲ.

ಮಾನಸ : ಬಹುಪಾಲು ಕೋಮುವಾದಿ ವಿರೋಧಿ ವೇದಿಕೆಗಳಲ್ಲಿ ಕೋಮುವಾದ ಮತ್ತು ಪುರುಷಪ್ರಧಾನ ಮೌಲ್ಯಗಳಿರುವ ಸಂಬಂಧವನ್ನು ಕಡೆಗಣಿಸಲಾಗುತ್ತದೆ. ಆ ಬಗ್ಗೆ ನಿಮ್ಮ ಅನಿಸಿಕೆ ಏನು?

ಪಣಿಕ್ಕರ್ : ಕೋಮುವಾದ ಪುರುಷಪ್ರಧಾನತೆಯನ್ನು ಎತ್ತಿ ಹಿಡಿಯುತ್ತದೆ. ಆ ವ್ಯವಸ್ಥೆ ನಿಂತಿರುವುದೇ ಮಹಿಳೆಯರನ್ನು ತುಳಿಯುವುದರ ಮೇಲೆ. ಬಿ.ಜೆ.ಪಿ ಪಕ್ಷದಲ್ಲಿ ಮಹಿಳೆಯರ ವಿಭಾಗ strong ಆಗಿಲ್ಲ. ಬಿ.ಜೆ.ಪಿ ಹಿಂದು ಪುರುಷ image ಅನ್ನೆ project ಮಾಡುತ್ತದೆ. ಜಾತ್ಯಾತೀತ ಶಕ್ತಿಗಳು ಲಿಂಗ ಪ್ರಶ್ನೆಯನ್ನು ಗುರುತಿಸಿಲ್ಲದಿರುವುದು ತಪ್ಪು. ಲಿಂಗ ಪ್ರಶ್ನೆ ಗಂಭೀರವಾದುದು. ದೆಹಲಿಯ J.N.U. ವಿಶ್ವವಿದ್ಯಾಲಯದಲ್ಲಿ ಮೊದಲ ಬಾರಿಗೆ ಮಹಿಳಾ ಅಧ್ಯಯನವನ್ನು ನಾನು ಪ್ರಾರಂಭಿಸಲು ಮಾಡಿದ ಪ್ರಯತ್ನಕ್ಕೆ ಹಲವರು ಲೇವಡಿ ಮಾಡಿದ್ದರು. ಲಿಂಗ, ಜಾತಿ, ಪರಿಸರ ಕುರಿತು ಎಡ ಮತ್ತು ಪ್ರಗತಿ ಪರ ಶಕ್ತಿಗಳು ಗಂಭೀರವಾಗಿ ಪರಿಗಣಿಸಬೇಕು.

ಮಾನಸ : ಕೋಮುವಾದವನ್ನು ಎದುರಿಸಲು cultural intervention ಬಹಳ ಮುಖ್ಯ, cultural intervention ಎಂದರೆ ಹಾಡು ನಾಟಕವಲ್ಲದೆ ದಿನನಿತ್ಯದ ಸಾಂಸ್ಕೃತಿಕ ಬದುಕಿಗೆ ಸಂಬಂದಪಟ್ಟದು ಎಂದು ಹೇಳುತ್ತೀರಿ ಆದರೆ ನಿತ್ಯ ಬದುಕಿನ ಆಹಾರ ಪದ್ದತಿಯೂ ಸಹ ಕೋಮುಗಲಭೆಗೆ ಕಾರಣವಾಗುವಾಗ cultural intervention ಹೇಗೆ ಸಾಧ್ಯ?

ಪಣಿಕ್ಕರ್ : ಆಹಾರ ಪದ್ದತಿ ಸಂಸ್ಕೃತಿಯ ಪ್ರಭಾವಕ್ಕೊಳಪಟ್ಟಂತಹದು. ನಮ್ಮ ಆಹಾರ ಪದ್ದತಿಯ ಶೇ. 50 ರಷ್ಟು ಹೊರಗಿನಿಂದ ಬಂದಿಗೆ. ಉದಾಹರಣೆಗೆ ಮೆಣಸಿನಕಾಯಿ, ಗೆಣಸು, ಕಾಫಿ ಇತ್ಯಾದಿ. ಸಂಸ್ಕೃತಿಗೆ ಎಲ್ಲವನ್ನು ಒಳಗೊಳ್ಳುವ ಗುಣವಿರುತ್ತದೆ ಎಂಬುದಕ್ಕೆ ಇದೊಂದು ಒಳ್ಳೆಯ ಉದಾಹರಣೆ. Food is a major part of the cultural existance ಕೋಮುವಾದ ಇವನ್ನೆಲ್ಲ ಹಾಳುಗೆಡವುತ್ತದೆ.

ಹಿಂದೂಗಳು ದನದ ಮಾಂಸ ತಿನ್ನುತ್ತಿದ್ದರೆಂಬುದು ಸಾಬೀತಾಗಿರುವ ವಿಷಯ. ಯಾವಾಗಿನಿಂದ ದನದ ಮಾಂಸಕ್ಕೆ ನಿಷೇಧ ಮಾಡಲಾಯಿತೆನ್ನುವುದನ್ನು ಗಮನಿಸಬೇಕು. ಅಲೆಮಾರಿ ಬದುಕಿನಿಂದ, ಒಂದೆಡೆ ನಿಂತು ವ್ಯವಸಾಯ ಮಾಡುವ ಬದುಕು ಪ್ರಾರಂಭವಾದಾಗ ಉಳುಮೆ, ಹೈನುಗಾರಿಕೆ ಮುಖ್ಯವಾಯಿತು. ಮುಂದೆ ಬೌದ್ಧ ಮತದ ಅಹಿಂಸಾ ತತ್ವ ಹೆಚ್ಚು ಪ್ರಚಲಿತವಾಯಿತು. ಈ ಅಂಶಗಳು ದನದ ಮಾಂಸದ ನಿಷೇಧಕ್ಕೆ ಕಾರಣವಾದವು. ಏನೇ ಆದರೂ ಸಾಮಾಜಿಕ ಸಂಸ್ಥೆಗಳ ಬದಲಾವಣೆ ಜೊತೆಗೆ ಆಹಾರ ಪದ್ದತಿ ಮೂಲಭೂತವಾಗಿ ಹವಾಮಾನ ಮತ್ತು ಭೌಗೋಳಿಕ ಅಂಶಗಳನ್ನು ಆಧರಿಸಿವೆ.

ನಿತ್ಯದ ಸಾಂಸ್ಕೃತಿಕ ಬದುಕಿಗೂ ಕೋಮುವಾದ ನುಸುಳಿರುವುದಕ್ಕೆ ಕಾರಣ ಸಮಗ್ರ ಬದಲಾವಣೆಯನ್ನು ಬಯಸುವ ವಿವೇಚನಾಯುಕ್ತ ಮನೋಭಾವನೆಯ ಕೊರತೆ. (lack of radical attitude) ವಿವೇಚನೆಯುಳ್ಳ ಮನೋಭಾವನೆಯ ತಿಳುವಳಿಕೆ ಮೂಡಬೇಕಾಗಿದೆ. (enlightenment of rational idea is needed) ಕಲಾ ಮಾಧ್ಯಮಗಳು ಈ ಮನೋಭಾವನೆಯನ್ನು ಬೆಳಸಲು ಸಹಾಯವಾಗಬೇಕು. ನಾನೊಮ್ಮೆ ರಾಮ ಸೀತೆ ಅಣ್ಣ ತಂಗಿ ಎಂದು ಜಾತಕ ಕತೆಯನ್ನಾಧರಿಸಿ ಹೇಳಿದ ವಿಷಯ ದೊಡ್ಡ ವಿವಾದವಾಯಿತು. ಜನರ ಭಾವನೆಗೆ ನೋವುಂಟುಮಾಡಬಾರದೆಂದು ಹೇಳಲಾಯಿತು. ಸತ್ಯವನ್ನ ಕಣ್ಣುಬಿಟ್ಟು ನೋಡುವ ಮನೋಭಾವ ಬೇಕು. ಜನರ ಭಾವನೆಗಳನ್ನು ಗೌರವಿಸದೇ ಆ ಪ್ರಪಂಚಕ್ಕೆ ನಾವು

ಕಾಲಿಡಲಾಗದು. ಗೌರವಿಟ್ಟುಕೊಂಡೆ ಮಾರ್ಪಾಡು ಮಾಡಬೇಕು. ರ್‍ಯಾಡಿಕಲ್ ಗುಂಪುಗಳು ವಿರೋಧಿಸುವುದನ್ನು ನಂಬಿದವೇ ಹೊರತು ಮಾರ್ಪಾಡು ಮಾಡುವತ್ತ ಗಮನ ನೀಡಲಿಲ್ಲ.

ಮಾನಸ : ಇತಿಹಾಸಕಾರರಾಗಿ ಉಪ-ಸಂಸ್ಕೃತಿ ಅಧ್ಯಯನಗಳ ಬಗ್ಗೆ ನಿಮ್ಮ ಅಭಿಪ್ರಾಯವೇನು?

ಪಣಿಕ್ಕರ್ : ಎಲ್ಲಾ ಸಂಸ್ಕೃತಿಗಳು ಸೇರಿ ಈ ನಾಡಿನ ಪರಂಪರೆಯಾಗಿರುವುದು. ಅನೇಕ ಸಂಸ್ಕೃತಿಯಿಂದಾಗಿಯೆ ವೈವಿಧ್ಯತೆ ಇರುವುದು. ಉದಾಹರಣೆಗೆ ವಿವಿಧ ಜಾತಿಗಳ ಇರುವಿಕೆಯು ವೈವಿಧ್ಯತೆಗೆ ಕಾರಣವಾಗಿದೆ. ಆದರೆ ಜಾತಿ-ಜಾತಿ ನಡುವಿನ ಮೇಲು ಕೀಳೆಂಬ ಜಾತೀಯತೆ ಹೋಗಬೇಕು. ಒಂದು ಜಾತಿಯ ಸಂಸ್ಕೃತಿ ಪ್ರಬಲವಾಗುವುದನ್ನು, ಏಕಸ್ವಾಮ್ಯ ಸ್ಥಾಪಿಸುವುದನ್ನು ವಿರೋಧಿಸಬೇಕು. ಎಲ್ಲ ಕೆಳ ಜಾತಿ, ವರ್ಗದ ಜನರ ಸಂಸ್ಕೃತಿಗಳು ಪ್ರಬಲ ಸಂಸ್ಕೃತಿಗೆ ಸವಾಲುಗಳೇ. ಆ ನಿಟ್ಟಿನಲ್ಲಿ ಉಪ-ಸಂಸ್ಕೃತಿಗಳು ಪ್ರಬಲ ಸಂಸ್ಕೃತಿಯನ್ನು ವಿರೋಧಿಸಬೇಕು, ಪರ್ಯಾಯ ಸಂಸ್ಕೃತಿಯಾಗಬಾರದು. its part of the total legacy. ಕೇರಳದಲ್ಲಿ ಸಾಮವೇದವನ್ನು ಪಠಿಸುವ ಐದೇ ಐದು ಜನ ಮಾತ್ರ ಉಳಿದುಕೊಂಡಿದ್ದರು. ಶ್ರಮ ವಹಿಸಿ ಅದನ್ನು ರೆಕಾರ್ಡ್ ಮಾಡಿಸಿದೆವು. ನಮ್ಮ ಸಂಸ್ಕೃತಿಯ ಭಾಗವಾದ ಸಾಮವೇದವನ್ನು ಉಳಿಸಿಕೊಳ್ಳುವುದು ಮುಖ್ಯ. ಆದರೆ ಅದನ್ನು ಅಥವಾ ಯಾವುದೇ ಶಾಸ್ತ್ರೀಯ ಮಾಧ್ಯಮಗಳನ್ನು ಬೇರೆ ಜಾತಿಗಳಿಗೆ ನಿಷೇಧಿಸುವುದು ತಪ್ಪು. ಎಲ್ಲಾ ಉಪ-ಸಂಸ್ಕೃತಿಗಳು ನಮ್ಮ ದೇಶದ ಪರಂಪರೆಯ ಜೀವವಾಹಿನಿಗಳು.

ಮಾನಸ : ಬೌದ್ಧಮತ, ಜೈನಮತಗಳು ಹಿಂದು ಧರ್ಮವನ್ನು ಪ್ರತಿಭಟಿಸಿ ಹುಟ್ಟಿಕೊಂಡಿದ್ದರ ಹಿನ್ನಲೆಯಲ್ಲಿ ಕೋಮುವಾದವನ್ನು ಕೇವಲ ಹಿಂದು ಮುಸ್ಲಿಂ ಧರ್ಮೀಯರಿಗೆ ಮಾತ್ರ ಅನ್ವಯಿಸುವುದನ್ನು ಹೇಗೆ ನೋಡುತ್ತೀರಿ?

ಪಣಿಕ್ಕರ್ : ಹಿಂದು ಧರ್ಮದ ವಿರುದ್ಧ ಬೌದ್ಧ, ಜೈನ ಧರ್ಮ, ವೈಷ್ಣವರು, ಶೈವರು, ಶಿಯಾಗಳು, ಸುನ್ನಿಗಳು, ಇವೆಲ್ಲವೂ ಧಾರ್ಮಿಕ ತಿಕ್ಕಾಟಗಳೆ ಹೊರತು ಕೋಮುವಾದಿ ತಿಕ್ಕಾಟಗಳಲ್ಲ. ಕೋಮುವಾದ ಧರ್ಮವನ್ನು ರಾಜಕೀಯ ಗೊಳಿಸುತ್ತದೆ, ಧರ್ಮವನ್ನು ಬಳಸಿಕೊಳ್ಳುವ ಗುಣ ಲಕ್ಷಣಗಳನ್ನು ಕೋಮುವಾದ ಹೊಂದಿದೆ. ಗುಜರಾತಿನ ನರಮೇಧ ಕೋಮುವಾದ ಫ್ಯಾಸಿಸಂನ ರೂಪ ಪಡೆದುಕೊಂಡಿರುವುದನ್ನು ಸಾಬೀತುಪಡಿಸಿದೆ. ಜಾತ್ಯಾತೀತ ಶಕ್ತಿಗಳು ಒಂದಾಗಿ ಫ್ಯಾಸಿಸ್ಟ್ ಶಕ್ತಿಗಳನ್ನೆದುರಿಸಬೇಕು ಜಾತ್ಯಾತೀತತೆ ಎಂದರೆ ಒಳ್ಳೆ ಹಿಂದುಗಳಾಗುವುದು, ಒಳ್ಳೆ ಮುಸ್ಲಿಂರಾಗುವುದೆಂದಲ್ಲ. ವಿವೇಚನೆ ಇರುವ ದೃಷ್ಟಿಕೋನ ಎಂದು ಪರಿಗಣಿಸುತ್ತೇನೆ. ಈ ಅರ್ಥದಲ್ಲಿ ಕೋಮುವಾದವನ್ನು ವಿರೋಧಿಸುವ ಧಾರ್ಮಿಕ ನಾಯಕರುಗಳು ಒಂದು ಹಂತದವರೆಗೆ ಹಿಂದುತ್ವದ ಶಕ್ತಿಗಳನ್ನು ಎದುರಿಸಲು ಸಾಧ್ಯ. ಇವರು ಧರ್ಮದ ಪರಿಧಿಯೊಳಗೆ ಕೋಮುವಾದವನ್ನು ವಿರೋಧಿಸುವುದಷ್ಟೆ ಅಲ್ಲ, ಸಾಮಾಜಿಕ ಆರ್ಥಿಕ ಪರಿಸ್ಥಿತಿಗೂ ಸ್ಪಂದಿಸಬೇಕು.

## ಕೇಳೆ ..... ಸಖಿ

ಎಡವದಿರೆಲ್ಲೂ ಗೆಳತಿ
ಹದಿಹರೆಯದ ಹಾದಿಯಲ್ಲಿ
ಕಣ್ಣಿಗೆ ಕಾಣದ
ಮುಳ್ಳುಕಲ್ಲುಗಳಿರುವವು
ಗಮನವಿರಲಿ ರಸ್ತೆಯ ಮೇಲೆ.....
ಎಡವಿದ ಗಾಯ
ಸಣ್ಣದೆಂದು ತಿಳಿಯಬೇಡ
ಅದರ ಆಳ ಹೆಚ್ಚು
ನೋವು ಉರಿ ಚುಚ್ಚುತ್ತೆ ನಿನ್ನ
ಅಳಿಸುತ್ತೆ ನರಳಿಸುತ್ತೆ
ಕೊನೆಗೆ ಕೆಂಗಡಿಸುತ್ತೆ

ರಸ್ತೆ ಬದಿಯಲ್ಲೇ ನಡಿ ಗೆಳತಿ
ಜಾಗ್ರತೆ! ಕಣ್ಣು ಕಿವಿ ಎಚ್ಚರವಿರಲಿ
ಆಗ ಅಪಘಾತ ಕಡಿಮೆ
ರಸ್ತೆ ದಾಟುವಾಗ ಕೂಡ ಸಖಿ
ಖಾತರಿಯಿರಲಿ, ವಾಹನಗಳಿಗೆ
ಸಿಲುಕುವುದಿಲ್ಲವೆಂದು,
ಗುರಿಯೆಂಬ ಮನೆ ತಲುಪೊವರೆಗೂ
ಎಚ್ಚರ! ಗೆಳತಿ ಎಚ್ಚರ!
ನಾ ಮಾಡಿದ ತಪ್ಪ ನೀ ಮಾಡಬೇಡ

- ಅನಿತಾ ಹಾಸನ

# ನನ್ನ ಶಿಲ್ಪಿಗಳು ನಡೆದು ಬಂದ ದಾರಿಯ ಗುರುತುಗಳಾಗಲಿ .........

ಕನಕಮೂರ್ತಿಯವರು ನಾಡಿನ ಹೆಸರಾಂತ ಶಿಲ್ಪಿ. ಅವರನ್ನು ಗುತ್ತಿಗೆ ಪೌರ ಕಾರ್ಮಿಕರ ಹೋರಾಟಕ್ಕೆ ಬೆಂಬಲ ನೀಡಬೇಕೆಂದು ದುಂಬಾಲು ಬಿದ್ದು ಬೆಂಬಲ ಗುಂಪಿಗೆ ಎಳೆದು ತಂದವಳು ಅವರ ಮಗಳು ಸುಮತಿ. ಚಿತ್ರಗಳನ್ನು ರಚಿಸುವ ಮೂಲಕ, ಶಿಲ್ಪ ಮಾಡುವುದರ ಮೂಲಕ ಪೌರ ಕಾರ್ಮಿಕರ ಹೋರಾಟವನ್ನು ಬೆಂಬಲಿಸುತ್ತಿರುವ ಕನಕ ಮೂರ್ತಿಯವರು ತಮ್ಮ ಭಾವನೆಗಳಿಗೆ ಬರವಣಿಗೆಯ ರೂಪ ನೀಡಿದ್ದಾರೆ. ಅದನ್ನು ಮಾನಸ ಓದುಗರಿಗಾಗಿ ಪ್ರಕಟಿಸಿದ್ದೇವೆ. ಅವರೇ ಮಾಡಿಕೊಟ್ಟ ಪೌರ ಕಾರ್ಮಿಕ ಮಹಿಳೆಯ ಚಿತ್ರವನ್ನು ಹಾಕಿದ್ದೇವೆ.

ನಾನು ಹುಟ್ಟಿದ್ದು ಬಹಳ ಸಂಪ್ರದಾಯಸ್ಥ ಬ್ರಾಹ್ಮಣರ ಮನೆಯಲ್ಲಿ. ಬಹಳ ದೊಡ್ಡ ಕುಟುಂಬ, ಈಗಿನ ಕಾಲಕ್ಕೆ ಊಹಿಸಲೂ ಸಾಧ್ಯವಿಲ್ಲದಷ್ಟು ಬಹಳ ದೊಡ್ಡದು. ಮನೆಯ ಜನರ ಜೊತೆ ನೆಂಟರು, ಅತಿಥಿಗಳು, ಅದೊಂದು ದೊಡ್ಡ ಜಾತ್ರೆ. ಅಲ್ಲಿ ದೊಡ್ಡವರಿಗಿರಲಿ, ಚಿಕ್ಕ ಮಕ್ಕಳಿಗೂ ಸಹ ತಮ್ಮ ಆಸೆ, ಅನಿಸಿಕೆಗಳನ್ನು ಹೇಳಿಕೊಳ್ಳುವುದೆಲ್ಲಿ ಬಂತು? ಚಿಕ್ಕಂದಿನಿಂದಲೂ ಏನೇನೋ ಆಸೆಗಳು, ಹಾಡಬೇಕು, ಕುಣಿಯಬೇಕು, ಚಿತ್ರ ಬಿಡಿಸಬೇಕು, ಡಾಕ್ಟರಾಗಬೇಕು ಏನೇನೋ. ಜೊತೆಗೆ ಊರಿನಾಚೆಗೆ, ಜನಸಂಪರ್ಕವೇ ಇಲ್ಲದಂತಹ ಜಾಗದಲ್ಲಿ ಒಂಟಿಮನೆ. ಅಪ್ಪ ನಡೆಸುತ್ತಿದ್ದ ರೈಸ್ ಮಿಲ್‌ಗೆ ಭತ್ತ ಬಿಡಸಲು ಬರುತ್ತಿದ್ದ ಜನರನ್ನು ನೋಡುವುದೇ ನಮಗೆ ಹೊಸನೋಟ. ಶಾಲೆಯಂತೂ ಮೈಲಿಗಳ ದೂರ, ಹೋಗಿ ಬರುವುದರೊಳಗೆ ಸಮಯವಾಗುತ್ತಿತ್ತು. ಇನ್ನು ಸ್ನೇಹಿತರ ಬಗ್ಗೆ ಯೋಚಿಸುವುದಿರಲಿ 'ಸ್ನೇಹಿತರು' ಎಂದರೇನು, ಸ್ನೇಹ ಎಂದರೇನು ಎಂಬ ಸ್ಥಿತಿ.

ಮನೆಯ ಪಕ್ಕದ ಒಂದು ರಸ್ತೆ ಮಾದಿಗರ ಗುಡಿಸಿಲುಗಳಿಗೆ ಹೋಗುತ್ತಿತ್ತು. ದಿನಾ, ಬೆಳಿಗ್ಗೆ, ಸಂಜೆ, ಮಧ್ಯಾನ್ಹ ಅಲ್ಲಿಂದ ಊರನ್ನು ಸ್ವಚ್ಛ ಮಾಡಲು ತಂಡ ಹೊರಡುತ್ತಿತ್ತು. ಹೆಂಗಸರು, ಗಂಡಸರು, ಉದ್ದುದ್ದ ಪರಕೆಗಳು, ಪುಟ್ಟಿಗೆಗಳನ್ನು ಹೊತ್ತು ಅವರನ್ನು ನೋಡುವುದೇ ಒಂದು ಎಂಟರ್‌ಟೈನಮೆಂಟ್. ಅದರಲ್ಲೂ ಆ ಹೆಂಗಸರು ಅತಿ ಸುಂದರವಾಗಿ ಕಾಣುತ್ತಿದ್ದರು. ಅಡ್ಡ ಸೀರೆ, ಬಾಯಿತುಂಬ ಎಲೆ ಅಡಿಕೆ, ತುಂಬು ಕೂದಲಿನ ದೊಡ್ಡ ಗಂಟು, ತಲೆಯ ಪಕ್ಕಕ್ಕೆ, ನೋಡಲು ಬಹಳ ಇಷ್ಟವಾಗುತ್ತಿತ್ತು. ಅದರಲ್ಲಿ ಕೆಲವರು ಮನೆಗೂ ಬರುತ್ತಿದ್ದರು. ಕೆಲಸ ಮಾಡಲು ಅಲ್ಲ, ಅದೇಕೋ ಅವರು ನಮ್ಮಲ್ಲಿ ಕೆಲಸ ಮಾಡುತ್ತಿರಲಿಲ್ಲ, ಕಾಂಪೌಂಡ್ ಸಹ ಗುಡಿಸುತ್ತಿರಲಿಲ್ಲ. ಕಕ್ಕಸು ಸ್ವಚ್ಛ ಮಾಡುವುದೇ ಇರಲಿಲ್ಲ. ಏಕೆಂದರೆ ನಮ್ಮ ತಂದೆ ದೊಡ್ಡ ಪಿಟ್ ತೋಡಿಸುತ್ತಿದ್ದರು. ಅದು ತುಂಬಿದ ಮೇಲೆ ಹೊಸದೊಂದು ಕಟ್ಟಿಸುತ್ತಿದ್ದರು. ಹಳಯದಕ್ಕೆ ಮಣ್ಣು ಮುಚ್ಚಿಸುತ್ತಿದ್ದರು. ಹಾಗಾಗಿ ಅವರಿಗೆ ಕೆಲಸವಿರಲಿಲ್ಲ. ಆದರೂ ಅವರು ಬರುತ್ತಿದ್ದುದು ಎಲೆ ಅಡಿಕೆ ತೆಗೆದುಕೊಳ್ಳಲು. ಅಮ್ಮ ಯಾವಾಗಲೂ ಧಾರಾಳಿ. ಯಾರೇ ಕೇಳಿದರೂ ಎಲೆ, ಅಡಿಕೆ ಕೊಟ್ಟು ಕಳುಹಿಸುತ್ತಿದ್ದರು. ಆ ಹೆಂಗಸರು ದೂರ ನಿಂತು, ''ಅಮ್ಮಣ್ಣೀ ವಕ್ಕಾಕೀಮ್ಮಾ'' ಎಂದು ಕೂಗುತ್ತಿದ್ದರು. ಆ ಚಿತ್ರ ಯಾವಾಗಲೂ ನನ್ನ ಮನಸ್ಸಿನಲ್ಲಿ ಬೇರೂರಿ ನಿಲ್ಲುತ್ತಿತ್ತು. ಶಾಲೆಯಲ್ಲಿ fancy dress competition ನಡೆಸಿದಾಗ ನಾನು ಮಾಡಿದ್ದು ಅದೇ ಪಾತ್ರ. ಅದೇ ತರಹ ಸೀರೆಯುಟ್ಟು, ದೊಡ್ಡ ಕುಂಕುಮವಿಟ್ಟು, ದೊಡ್ಡ ಗಂಟು ಹಾಕಿಕೊಂಡು, ಬಾಯಿ ತುಂಬ ಎಲೆ ಅಡಿಕೆ ಜಗಿಯುತ್ತಾ ಪರಕೆ ಹಿಡಿದು ರಂಗದ ಮೇಲೆ ಬಂದು, ಅವರಂತೆ ಸ್ವಲ್ಪ ಗುಡಿಸಿ ಎಲೆ ಅಡಿಕೆ ಬಾಯಿಗೆ ಎಸೆದುಕೊಂಡು, ಸ್ವಲ್ಪ ಕೂತು, ಮತ್ತೆ ಅಮ್ಮಣ್ಣೀ, ''ಅಮ್ಮಣ್ಣೀ ಲಚ್ಚಿ ವಚಿನ್ನಾನು, ವಕ್ಕಾಕೀಮ್ಮಾ'' ಎಂದು ಕೂಗಿ ಹೇಳಿದ್ದೆ. ನೋಡುಗರು ಜೋರು ಚಪ್ಪಾಳೆ ತಟ್ಟಿದ್ದರು, ಬಹುಮಾನ ಬಂತೆಂದು ಬೇರೆ ಹೇಳಬೇಕೆ ?

ಇದರ ಅಭ್ಯಾಸ ಮನೆಯಲ್ಲಿ ಹಲವಾರು ಬಾರಿ ನಡೆದಿತ್ತು, ಬಹುಮಾನ ಬಂದ ಮೇಲೆ ಬಂದ ನೆಂಟರೆದುರಿಗೆ ಹಲವಾರು ಬಾರಿ ಮಾಡಬೇಕಿತ್ತು. ಇದು ನನ್ನ ಚಿಕ್ಕಂದಿನ ಅನುಭವ. ಬೆಳೆಯುತ್ತಾ ಬೆಳೆಯುತ್ತಾ ಪ್ರಪಂಚದ ಯಾವ ಆಗುಹೋಗುಗಳೂ ನನ್ನನ್ನು ಸೆಳೆಯುತ್ತಿರಲಿಲ್ಲ. ನನಗಿದ್ದ ಕಲಿಯುವ ಬಯಕೆಗಳಿಗೆ ಸಿಗುತ್ತಿದ್ದ ಸಮಯ ಬಹಳ ಕಡಿಮೆ. ಯಾವುದು ಯಾವುದೋ ಬೇಡದ ಕೆಲಸಗಳನ್ನು ಮಾಡಬೇಕು, ಮಿಕ್ಕ ಸಮಯದಲ್ಲಿ ಕಲಿಕೆ. ಇದೇ ಬದುಕು ನಿರಂತರ ಸಾಗಿತ್ತು. ನನ್ನ ಮಗುವಿನ ಜೊತೆ ಆಡಲೂ ಸಮಯವಿರುತ್ತಿರಲಿಲ್ಲ. ಇನ್ನು ಬೇರೆಯವರ ಬದುಕು, ಅವರ ಕಷ್ಟ ಸುಖ ಗಮನಿಸಲು, ತಿಳಿದುಕೊಳ್ಳಲು ಅವಕಾಶವೆಲ್ಲಿ ? ಕುವೆಂಪುರವರ 'ಜಲಗಾರ' ನಾಟಕ, ಪುಟ್ಟಣ್ಣನವರ 'ದೇವರೆಲ್ಲಿ' ? ಕಾದಂಬರಿಯಲ್ಲಿ ಈ ಜನರ

ಬಗ್ಗೆ ಓದಿದ್ದ ನೆನಪು ಇಂದಿಗೂ ಹಸಿಯಾಗಿಯೇ ಇದೆ. ಜೀವನದಲ್ಲಿ ಅದನ್ನು ನೋಡಿ, ಅವರಿಗೆ ಸಹಾನುಭೂತಿ ತೋರಿಸುವುದಕ್ಕೂ ನನ್ನಿಂದ ಸಾಧ್ಯವಾಗಿಲ್ಲ. ನನಗೆ ನನ್ನದೇ ಪ್ರಪಂಚ, ನನ್ನ ಶಿಲ್ಪ, ನಾನು, ಮಿಕ್ಕಿದ್ದೆಲ್ಲ ಆಮೇಲೆ. ನನಗೆ ಸಿಗುವ ಪ್ರತಿಯೊಂದು ನಿಮಿಷವೂ ನನಗಾಗಿ ಮಾತ್ರ ಎಂಬ ಲೋಭಿತನ. ಇಂತಹುದೇ ಬದುಕಿನಲ್ಲಿ ಬೇರೆಯವರ ಕಷ್ಟ ಸುಖಗಳಿಗೆ ಕಣ್ಣು ತೆರೆಸುತ್ತಿರುವವಳು ನನ್ನ ಮಗಳು. ಈಗಲಾದರೂ ಬೇರೆಯವರ ಬಗ್ಗೆ ಯೋಚಿಸೋಣವೆಂದರೆ, ನನಗಾಗಿ ನಾನು ಬದುಕಲು ಸಿಕ್ಕಿರುವುದೇ ಈಗ, ಅದನ್ನು ಬೇರೆಯವರೊಡನೆ ಹಂಚಿಕೊಳ್ಳಲಾರದಷ್ಟು ಜುಗ್ಗಿತನ. ಹೊರಗೆ ಹೋಗಿ ಎಲ್ಲರಂತೆ ಮೆರವಣಿಗೆಯಲ್ಲಿ ಭಾಗವಹಿಸುವುದಾಗಲೀ, ಅವರನ್ನು ನೋಡಲು ಹೋಗುವುದಾಗಲೀ ಸಾಧ್ಯವಾಗುತ್ತಿಲ್ಲ. ನನ್ನ ಮನೆಯ ಬಳಿ ಇರುವ ಆ ಕೆಲಸದವರನ್ನು ಪ್ರೀತಿಯಿಂದ ಮಾತನಾಡಿಸುತ್ತೇನೆ. ನನ್ನ ಶಿಲ್ಪಕ್ಕೆ ರೇಖಾ ಚಿತ್ರಗಳಿಗೆ ಈ ಕಷ್ಟ ಜೀವಿಗಳೇ ಸ್ಫೂರ್ತಿ. ಮುಂದೊಂದು ದಿನ ಅವರ ಬದುಕು ಹಸನಾದಾಗ, ಅವರ ಬಯಕೆಗಳು ಈಡೇರಿ ಎಲ್ಲರಂತೆ ಅವರೂ ಬದುಕುವಾಗ ಇಂತಹ ಶಿಲ್ಪ ಚಿತ್ರಗಳು ಜನಗಳಿಗೆ ಅವರು ನಡೆದು ಬಂದ ದಾರಿಯನ್ನು ತೋರಿಸುವ ಗುರುತುಗಳಾಗಬಹುದೆಂಬ ಆಸೆ. ಇದಕ್ಕಿಂತ ನಾನೇನು ಮಾಡಬಲ್ಲೆ?

- ಕನಕಮೂರ್ತಿ

---

# ಸಾಥಿನ್‌ಗಳ ಸಂಘಟನೆಗೆ ಮತ್ತೊಂದು ಜಯ

---

ರಾಜಾಸ್ಥಾನ ಸರ್ಕಾರದ ವಿಮೆನ್ ಡೆವಲಪ್‌ಮೆಂಟ್ ಪ್ರೊಗ್ರಾಮ್ ನ ಉಳಿವಿಗೆ ಮತ್ತು ಅದರೊಂದಿಗೆ ಸಶಕ್ತೀಕರಣದ ರಚನೆಯನ್ನು ಬಲಪಡಿಸುವುದರಲ್ಲಿ ಸಾಥಿನ್‌ಗಳ ಸಂಘಟನೆಗೆ ದೇಶದ್ಯಾಂತ ಬೆಂಬಲ ದೊರಕಿದೆ. ರಾಜಸ್ಥಾನ ಸರ್ಕಾರಕ್ಕೆ ಈ ಕಾರ್ಯಕ್ರಮವನ್ನು ಹಿಂತೆಗೆದುಕೊಳ್ಳಲು ವಿಪರೀತ ಒತ್ತಡ ಬರುತ್ತಿದೆ. ಸಾಥಿನ್‌ಗಳ ಸಂಘಟನೆಯು ಇತರ ಮಹಿಳಾ ಸಂಘಟನೆಗಳೊಂದಿಗೆ ಸೇರಿ ಮಂಡಿಸಿದ ಮೂರು ಬೇಡಿಕೆಗಳನ್ನು ರಾಜಸ್ಥಾನ ಸರ್ಕಾರದ ಮುಖ್ಯ ಮಂತ್ರಿಗಳು ಒಪ್ಪಿಕೊಂಡು ಸಾಥಿನ್‌ಗಳ ಮನಸ್ಸನ್ನು ಗೆದ್ದಿದ್ದಾರೆ. ರಾಜಸ್ಥಾನ ಮುಖ್ಯ ಮಂತ್ರಿಗಳ ಜೊತೆ ನಡೆದ ಉನ್ನತ ಮಟ್ಟದ ಸಭೆಯಲ್ಲಿ ಈ ಕೆಳಕಂಡ ತೀರ್ಮಾನಗಳನ್ನು ತೆಗೆದುಕೊಳ್ಳಲಾಯಿತು ಮತ್ತು ಆ ತೀರ್ಮಾನಗಳಿಗೆ ಅರ್ಥ ಸಚಿವಾಲಯದಿಂದ ಒಪ್ಪಿಗೆ ಕೂಡ ಪಡೆಯಲಾಯಿತು.

ಆ ತೀರ್ಮಾನಗಳು ಈ ರೀತಿ ಇವೆ:

1. ಪ್ರಸ್ತುತ ಚಾಲ್ತಿಯಲ್ಲಿರುವ ವಿಮೆನ್ ಡೆವೆಲಪ್‌ಮೆಂಟ್ ಪ್ರೊಗ್ರಾಮ್ (WDP) ಯ ರಚನೆ ಹಾಗೇ ಇರಬೇಕು. ಅಂದರೆ ಈಗಾಗಲೇ ಇದರ ರಚನೆಯಲ್ಲಿರುವ ಸಾಥಿನ್‌ಗಳು, ಪ್ರಾಚೇಟಾಸ್, ವಲಯ ಅಂಗಸಂಸ್ಥೆಗಳು ಮತ್ತು ನಿರ್ದೇಶನಾಲಯ ಹಾಗೇ ಉಳಿಯಬೇಕು. ಈ ಹಿಂದೇ ಕೈಬಿಡಲಾಗಿದ್ದ ಹೆಚ್ಚುವರಿ ನಿರ್ದೇಶಕರ ನೇಮಕಾತಿ ಮತ್ತೆ ಮಾಡಬೇಕು.

2. ರಾಜಸ್ಥಾನದಲ್ಲಿ ಮಹಿಳಾ ಸಶಕ್ತೀಕರಣದತ್ತ ಹೆಚ್ಚು ಗಮನ ಹರಿಸಿ ಬಲಪಡಿಸುವುದು. ಪ್ರಸ್ತುತ ಇರುವ ಕೆಳಮಟ್ಟದ ರಚನೆಯನ್ನು ವಿಶ್ಲೇಷಿಸಲು HCM-RIPA (ಹರೀಶ್ ಚಂದ್ರ ಮಾತೂರ್ ಮತ್ತು ರಾಜಸ್ಥಾನ ಸರ್ಕಾರದ ಇನ್‌ಸ್ಟಿಟ್ಯೂಟ್ ಆಫ್ ಪಬ್ಲಿಕ್ ಅಡ್‌ಮಿನಿಸ್ಟ್ರೇಷನ್) ಅವರನ್ನು ನೇಮಿಸುವುದು. ಈ ಸಮಿತಿಯಲ್ಲಿ ಸಿ.ಪಿ. ಸುಜಾತ (ಮಾಜಿ ಕಾರ್ಯದರ್ಶಿ ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ) ಡಾ. ಕುಮುದ್ ಶರ್ಮಾ (ಮಾಜಿ ನಿರ್ದೇಶಕಿ ಮಹಿಳೆಯರ ಅಭಿವೃದ್ಧಿ ಅಧ್ಯಯನ ಕೇಂದ್ರ), ಸಯೀದ ಹಮೀದ್ (ಮಾಜಿ ರಾಷ್ಟ್ರೀಯ ಮಹಿಳಾ ಆಯೋಗದ ಸದಸ್ಯೆ), ಮತ್ತು ಲಕ್ಷ್ಮಿ ಮೂರ್ತಿ (ಮಹಿಳಾ ಕಾರ್ಯಕರ್ತೆ ಮತ್ತು ಪತ್ರಕರ್ತೆ) ಇವರುಗಳನ್ನು ನೇಮಿಸಲಾಯಿತು.

3. HCM-RIPAಸಮಿತಿಯು "ಮಹಿಳಾ ಸಶಕ್ತೀಕರಣದ ಸಂಸ್ಥೆಯನ್ನು ಕಟ್ಟುವುದು ಮತ್ತು ಬಲಗೊಳಿಸುವುದು ಎಂಬ ವಿಷಯದ ಬಗ್ಗೆ" ವಿಚಾರ ಸಂಕಿರಣ ನಡೆಸಿ, ವಿಶ್ಲೇಷಣೆ ನಡೆಸಿದ ವರದಿಯನ್ನು ಮಂಡಿಸಿ, ಸಲಹೆಗಳನ್ನು ನೀಡಲಿದೆ. ಸರ್ಕಾರಿ ಅಧಿಕಾರಿಗಳು, WDPಕಾರ್ಯಕರ್ತರು ಮಹಿಳಾ ಸಂಘಟನೆಯ ಕಾರ್ಯಕರ್ತರು ಭಾಗವಹಿಸಲಿದ್ದಾರೆ.

ರಾಜಸ್ಥಾನದ ಮಹಿಲಾ ಸಶಸ್ತ್ರೀಕರಣದ ಕಾರ್ಯಕ್ರಮವು ಸರಿಯಾದ ದಿಕ್ಕಿನಲ್ಲಿ ನಡೆಯಲೆಂದು ಹಾರೈಸುತ್ತೇವೆ.

ವರದಿ - 'ಸಹೇಲಿ'

# ಪ್ರಾಚೀನ ಭಾರತದಲ್ಲಿ "ಮಹಿಳೆಯರು" ಭಾಗ - 1

ನಾವೆಲ್ಲರೂ ಒಂದಲ್ಲ ಒಂದು ಸಂದರ್ಭದಲ್ಲಿ ಪ್ರಾಚೀನ ಭಾರತದ "ಮಹಿಳೆಯರ ಸ್ಥಾನಮಾನ/ಸ್ಥಿತಿಗತಿ"ಯ ಬಗ್ಗೆ ಹೇಳಿಕೆಗಳನ್ನು ಕೇಳುತ್ತಿರುತ್ತೇವೆ. ಅವುಗಳಲ್ಲಿ ಸಾಮಾನ್ಯವಾಗಿ ಈ ಕೆಳಕಂಡ ಅಂಶಗಳಿರುತ್ತವೆ.

- ಅಂದು ಮಹಿಳೆಯರ ಸ್ಥಿತಿಗತಿಗಳು ಉತ್ತಮವಾಗಿದ್ದವು
- ಕಾಲಕ್ರಮೇಣ ಅವರ ಸ್ಥಾನಮಾನಗಳು ಇಳಿಮುಖವಾದವು
- ಗತವೈಭವವನ್ನು ಮತ್ತೆ ಪಡೆಯಲು ನಾವು ಯಾವುದಾದರೂ ವಿಧಾನಗಳು ಮತ್ತು ಸಾಧನಗಳನ್ನು ಕಂಡುಕೊಳ್ಳಬೇಕು.

ಇಂಥ ಹೇಳಿಕೆಗಳು ಈಗಿನ ಸರಕಾರಿ ದಾಖಲೆಗಳಲ್ಲೂ ಕಂಡು ಬರುತ್ತವೆ, ಉದಾಹರಣೆಗೆ ರಾಷ್ಟ್ರೀಯ ಮಹಿಳಾ ಆಯೋಗದ 'ಅತ್ಯಾಚಾರ ವರದಿ'ಯಲ್ಲಿ ಹೀಗೆ ಉಲ್ಲೇಖಿಸಲಾಗಿದೆ.

"ಏನೇ ಆದರೂ ಪ್ರಾಚೀನ ಭಾರತದಲ್ಲಿ ಕುಟುಂಬ ಮತ್ತು ಸಮಾಜಗಳಲ್ಲಿ ಮಹಿಳೆಯರು ಒಂದು ಸಮರ್ಥವಾದ ಸ್ಥಾನವನ್ನು ಪಡೆದಿದ್ದರು. ಕುಟುಂಬದ 'ರಾಣಿ'ಯಂತಿದ್ದ ಅವಳ ಬಗ್ಗೆ ಇತರರು ಹೊಟ್ಟೆಕಿಚ್ಚು ಪಡುತ್ತಿದ್ದರು. ದುರದೃಷ್ಟವಶಾತ್ ಎಂಟನೇ ಶತಮಾನದಿಂದ ಸತತವಾಗಿ ನಡೆದ ವಿದೇಶೀ ಧಾಳಿಗಳಿಂದಾಗಿ ಮಹಿಳೆಯರ ಪರಿಸ್ಥಿತಿ ಕೆಡತೊಡಗಿತು. ಧಾಳಿಕೋರರ ದುರ್ಬಳಕೆಗೆ ಸಿಕ್ಕಿಬೀಳುವ ಮಹಿಳೆಯರನ್ನು ರಕ್ಷಿಸುವ ಹೊಣೆಗಾರಿಕೆ ಪುರುಷರದಾಯಿತು. ಇದರಿಂದ ಸಹಜವಾಗಿಯೇ (ಆಕ್ರಮಣಶೀಲ) ಪುರುಷನಿಗೆ ಕುಟುಂಬವಲಯದಲ್ಲಿ ಪ್ರಧಾನಪಾತ್ರ ದೊರೆಯಿತು ಮಾತ್ರವಲ್ಲ, ಮಹಿಳೆಯರು ಪುರುಷನನ್ನು ಅವಲಂಬಿಸುವುದು ಅನಿವಾರ್ಯವಾಯಿತು (ಪು: 2)

ಈ ವರದಿಗೆ ಅಂತಿಮರೂಪ ಕೊಡುವ ಹಂತದ ಚರ್ಚೆಯಲ್ಲಿ ಕೆಲವರು ಪ್ರಾಚೀನ ಭಾರತದಲ್ಲಿ ಮಹಿಳೆಯರು ಪಡೆದಿದ್ದ ಗೌರವ ಮತ್ತು ಘನತೆಯುಕ್ತ ಉನ್ನತ ಸ್ಥಾನಮಾನವನ್ನು ಅವರಿಗೆ ದೊರಕಿಸುವ ಭರವಸೆಯನ್ನು ಭಾರತ ನೀಡಬೇಕು. ಗ್ರಂಥಗಳು ಸ್ಪಷ್ಟಪಡಿಸುವಂತೆ ಮಹಿಳೆಯರು 'ಅರ್ಧಾಂಗಿನಿ' 'ಗೃಹಲಕ್ಷ್ಮಿ' ಮತ್ತು 'ಧರ್ಮಪತ್ನಿ'ಯರಾಗಿ ಗೌರವಯುತ ಸ್ಥಾನಮಾನವನ್ನು ಹೊಂದಿದ್ದರು. (ಪು: 55) ಎಂದು ಉಪಸಂಹಾರದಲ್ಲಿ ಹೇಳಲಾಗಿದೆ.

ಅಂಥ ಪೂರ್ವ ನಂಬಿಕೆಗಳು ಸಾಮಾನ್ಯವಾಗಿ ಹೆಚ್ಚಿನ ನೀತಿಗಳನ್ನು ರೂಪಿಸುತ್ತವೆ ಕೂಡ. ಉದಾಹರಣೆಗೆ ಎನ್.ಸಿ.ಇ.ಆರ್.ಟಿ.ಇ.ಯ ರಾಷ್ಟ್ರೀಯ ಪಠ್ಯ ನೀತಿ (National Curriculum Framework) ನಲ್ಲಿ ಈ ಕೆಳಕಂಡಂತಿದೆ.

ಇದರ ಅರ್ಥವೇನೆಂದು ಯೋಚಿಸಿ

- ಒಂದು ವೇಳೆ ಮಹಿಳೆಯರು ವಿವಾಹಿತರಾಗಿದ್ದರೆ ಮತ್ತು ಪಳಗಿಸಿದ ದೇವತೆಗಳಂತೆ ತಮ್ಮ ಮನೆಯ ನಾಲ್ಕು ಗೋಡೆಗಳ ಒಳಗೆ ಬದುಕುತ್ತಿದ್ದರೆ ಮಾತ್ರ ಸುರಕ್ಷಿತರಾಗಿರುತ್ತಾರೆಂದು ಅರ್ಥವೆ?
- ಕುಟುಂಬದಲ್ಲಿ ಹಿಂಸೆ ಎಂದರೇನು?

"ಕೃಷಿ ಪ್ರಧಾನವಾದ ಸಮಾಜದಲ್ಲಿ ವಂಶಪಾರಂಪರಿಕ ವೃತ್ತಿಯನ್ನು, ಕುಟುಂಬ ಅಥವಾ ವ್ಯಾಪಕ ಅರ್ಥದಲ್ಲಿ ಜಾತಿಯ ಧ್ಯೇಯ ಧೋರಣೆಗಳನ್ನು ಅನುಸರಿಸಲಾಗುತ್ತಿತ್ತು". (ಪು:3-4)

**ಸಾಮಾಜಿಕ ವ್ಯವಸ್ಥೆಯು ನಿರ್ಬಾಧಿತವಾಗಿ ಮುಂದುವರೆಯಲು ಲಿಂಗ ಮತ್ತು ಜಾತಿಯ ಏಣಿಶ್ರೇಣಿಗಳು ಅತ್ಯವಶ್ಯ ಎನ್ನುವ ಅಭಿಪ್ರಾಯ ಇಲ್ಲಿದೆ. ಅಂಥ ಏಣಿಶ್ರೇಣಿಯಲ್ಲಿ ಎದ್ದು ಕಾಣುವ ಅಸಮಾನತೆಗಳನ್ನು ಕಡೆಗಣಿಸಲಾಗಿದೆ.**

"ಮಹಿಳೆಯರು, ಪರಿಶಿಷ್ಟ ಜಾತಿ ಮತ್ತು ಪಂಗಡಗಳು, ದೈಹಿಕ ಅಂಗವಿಕಲರು ಮುಂತಾದ

ಸಾಮಾಜಿಕವಾದ ತಾರತಮ್ಯಕ್ಕೊಳಗಾದ ಗುಂಪುಗಳ ವೈವಿಧ್ಯಮಯ ಅವಶ್ಯಕತೆಗಳನ್ನು ಪೂರೈಸಲು ವೃತ್ತಿಪರ ಶಿಕ್ಷಣ ಕಾರ್ಯಕ್ರಮವನ್ನು ರೂಪಿಸಲಾಗಿದ್ದು ಅಂಥವರು ಸೂಕ್ತವಾದ ಉತ್ಪಾದನಾ ಕೌಶಲಗಳನ್ನು ಪಡೆದುಕೊಳ್ಳಲು ನೆರವಾಗುತ್ತದೆ'' (ಪು:90) ಎಂದು ವೃತ್ತಿಪರ ಶಿಕ್ಷಣವನ್ನು ಕುರಿತಂತೆ ಹೇಳಲಾಗಿದೆ.

ಇದನ್ನು ಇನ್ನೊಂದು ರೀತಿಯಲ್ಲಿ ಅರ್ಥೈಸುವುದಾದರೆ ಸಾರ್ವತ್ರಿಕ ಮತ್ತು ಸಮಾನವಾದ ಅಥವಾ ಅದಕ್ಕೆ ಪರ್ಯಾಯವಾಗಿ ಶಿಕ್ಷಣದ ಧ್ಯೇಯಗಳಿಗೆ ಬಾಯಿಮಾತಿನ ಸಹಾನುಭೂತಿ ತೋರಿಸುವುದರಿಂದ ಹಿಡಿದು, ಲಿಂಗ, ಜಾತಿ ಮತ್ತಿತರ ಮಾನದಂಡಗಳನ್ನಾಧರಿಸಿದ ಭಿನ್ನಭಿನ್ನವಾದ ಶೈಕ್ಷಣಿಕ ಕಾರ್ಯಕ್ರಮಗಳವರೆಗೆ ಅಲ್ಲೊಂದು ಮೋಸದ ಎಳೆ/ಜಾಲವಿದೆ.

ಇಂಥ ನೀತಿ ಹೇಳಿಕೆಗಳ ಗೂಡಾರ್ಥಗಳು ಬಹುದೂರದವರೆಗೆ ಎಳೆದೊಯ್ಯುವಂತದ್ದಾಗಿದೆ; ಅದನ್ನು ಎಚ್ಚರಿಕೆಯಿಂದ ಪರಿಶೀಲಿಸುವ ಮತ್ತು ನಿರಂತರ ವಿಮರ್ಶೆಗೊಳಪಡಿಸುವ ಅಗತ್ಯವಿದೆ. ಇಂಥ ಮಾತುಗಳಿಗೆ ಸಮರ್ಥನೆಯಂತೆ ಹೊರನೋಟಕ್ಕೆ ಕಾಣುವ ಪ್ರಾಚೀನ ಭಾರತದಲ್ಲಿನ ಮಹಿಳೆಯರ ಬಗೆಗಿರುವ ಕೆಲವು ನಂಬಿಕೆಗಳನ್ನು ಮುಕ್ತವಾಗಿ ಬಿಚ್ಚಿಡುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

### 'ಮಹಿಳೆಯರ ಸ್ಥಾನ' ಎಂದರೇನು?

ಪ್ರಾಚೀನ ಕಾಲದಲ್ಲಿ 'ಮಹಿಳೆಯರ ಸ್ಥಾನಮಾನ'ದ ಬಗ್ಗೆ ನಮಗೆ ಮತ್ತೆ ಮತ್ತೆ ಮರುಕಳಿಸುವ ಪೂರ್ವಗ್ರಹವಿದೆ. ಆದರೆ ಅದೇ ರೀತಿಯ ಕಾಳಜಿ ಪುರುಷರ ಸ್ಥಾನಮಾನದ ಬಗ್ಗೆ ಏಕಿಲ್ಲ ಎಂದು ನಿಮಗೆಂದಾದರೂ ಆಶ್ಚರ್ಯವಾಗಿದೆಯೆ? ಇಂಥ ಎದ್ದು ಕಾಣುವ ಪ್ರಮಾಣಬದ್ಧವಲ್ಲದುದನ್ನು ಸುಮ್ಮನೆ ಒಪ್ಪಿಕೊಳ್ಳಲು ಬಹುಶಃ ಎರಡು ಮುಖ್ಯ ಕಾರಣಗಳಿವೆ.

ಒಂದನೆಯದು ಈ ಪ್ರಶ್ನೆಗೆ 'ಸ್ಥಾನಮಾನ'ದಂಥ ಶಬ್ದಗಳಲ್ಲಿ ಉತ್ತರಿಸಿದಾಗ ಅದಕ್ಕೊಂದು ಒಳಾರ್ಥವಿರುತ್ತದೆ. ಅದೆಂದರೆ ವ್ಯಕ್ತಿಯೊಬ್ಬರಿಗೆ ಗೊತ್ತುಪಡಿಸಿರುವ ಸ್ಥಾನ ಎಂದರೆ ಅದನ್ನು ಇನ್ನೊಬ್ಬರು ಕೊಟ್ಟಿರುವಂತಹದು ಎಂದರ್ಥ ಮಹಿಳೆಯರಿಗೆ ಅಂದು ಗೌರವಾನ್ವಿತ ಅಥವಾ ಉನ್ನತ ಸ್ಥಾನವೊಂದನ್ನು ನೀಡಲಾಗಿತ್ತೆಂದು ಹೇಳಲಾಗಿದೆ. ಇದರ ಅಂತರಾಳದಲ್ಲಿ ಮಹಿಳೆಯರು ವಿವಿಧ ಸಾಮಾಜಿಕ 'ಮನ್ನಣೆ'ಗಳನ್ನು ನಿಷ್ಕ್ರಿಯರಾಗಿದ್ದುಕೊಂಡು ಪಡೆಯುವವರಾಗಿದ್ದರು ಎಂಬರ್ಥವಿದೆ. ಅಂದರೆ 'ಸ್ಥಾನದ' ದೃಷ್ಟಿಕೋನವು ಮಹಿಳೆಯರಿಗೆ ಮಧ್ಯವರ್ತಿಯ ಅಗತ್ಯವನ್ನು ಅಲ್ಲಗಳೆಯುತ್ತದೆ. ಪರಿಣಾಮವೆಂದರೆ ಅದೊಂದು ಆದರ್ಶ ಸ್ತ್ರೀತ್ವದ ರೂಢಿಗತ ಮಾದರಿಯ ವಿಚಾರಗಳಿಗೆ ಮತ್ತೆ ಒತ್ತು ನೀಡುತ್ತದೆ. ಪುರುಷರ ಸ್ಥಾನಮಾನದ ಬಗ್ಗೆ ಕೇಳಿ ಬರದಿದ್ದಲ್ಲಿ ನಾವು ಬಹುಶಃ ಅಚ್ಚರಿಪಡಬೇಕಾದುದಿಲ್ಲ. ಏನೇ ಆದರೂ ಪ್ರಸ್ತುತ ಸಮಾಜದಲ್ಲಿ ಅದನ್ನೇ ವಿಸ್ತರಿಸಿದರೆ ಇತಿಹಾಸದಲ್ಲಿ ಅವರನ್ನು ಮಧ್ಯವರ್ತಿಗಳೆಂದೇ ಭಾವಿಸಲಾಗುತ್ತದೆ.

### ಪುರುಷರ ಸ್ಥಾನದ ಬಗ್ಗೆ ನಾವೇಕೆ ಮಾತಾಡುವುದಿಲ್ಲ?

''ಪುರುಷರು'' ವಿಶ್ಲೇಷಣೆಗೆ ಅರ್ಹವಾದ ಒಂದು ವರ್ಗವಲ್ಲ ಎನ್ನುವುದನ್ನು ಪುರಾತನ ಭಾರತವನ್ನು ಕುರಿತ ಒಂದು ಗಹನವಾದ ಐತಿಹಾಸಿಕ ಪಾಂಡಿತ್ಯವು ಒಪ್ಪಿಕೊಳ್ಳುತ್ತದೆ. ಏಕೆಂದರೆ ಪುರುಷರು-ಆಳುವವರು, ಪುರೋಹಿತರು, ವ್ಯಾಪಾರಿಗಳು, ಕುಶಲಕರ್ಮಿಗಳು, ರೈತರು, ಬೇಡರು, ಬೆಸ್ತರು, ಕುರುಬರು, ಮುಂತಾಗಿ ವೈವಿಧ್ಯಮಯವಾಗಿದ್ದಾರೆ. ''ಪುರುಷರು'' ಎಂಬ ವರ್ಗದ ಸಮರೂಪತೆ/ಸಾಮ್ಯತೆಯು ಸಂಕೀರ್ಣವಾದ ಸಾಮಾಜಿಕ ರಾಜಕೀಯ ಮತ್ತು ಆರ್ಥಿಕ ಪರಿಸ್ಥಿತಿಗಳಿಂದಾಗಿ ಇಲ್ಲವಾಗುತ್ತದೆ. ಈ ವಿಭಾಗಗಳು ಸಾಂಸ್ಕೃತಿಕ, ಧಾರ್ಮಿಕ ಮತ್ತು ಪ್ರಾದೇಶಿಕ ಪರಂಪರೆಗಳನ್ನಾಧರಿಸಿ ಮತ್ತಷ್ಟು ಸಂಕೀರ್ಣವಾಗುತ್ತವೆ.

ಇದು ಮಹಿಳೆಯರಿಗೂ ಅನ್ವಯಿಸುತ್ತದೆ

ನ್ನುವುದನ್ನು ನಾವಿಲ್ಲಿ ಅರ್ಥ ಮಾಡಿಕೊಳ್ಳಬೇಕು. ಈಗ ಪ್ರಾಚೀನ ಭಾರತದ ಮಹಿಳೆಯರ ಬಗೆಗೆ ತಿಳಿಯುವುದು ಮುಖ್ಯವಾದಂತೇ ನಾವು ಯಾವ ವರ್ಗದ ಮಹಿಳೆಯರನ್ನು ಕೇಂದ್ರೀಕರಿಸುತ್ತೇವೆ, ಅವರ ಇತಿಹಾಸಗಳು ಹೇಗೆ ರೂಪುಗೊಂಡವು, ಅವು ಬೇರೆ ವರ್ಗಗಳ ಪುರುಷರು ಮತ್ತು ಮಹಿಳೆಯರದಕ್ಕಿಂತ ಹೇಗೆ ಭಿನ್ನವಾಗಿವೆ ಅಥವಾ ಹೋಲುತ್ತವೆ ಎನ್ನುವುದನ್ನು ನಮಗೆ ನಾವೇ ಕೇಳಿಕೊಳ್ಳಬೇಕು. ಮಹಿಳೆಯರನ್ನು ಕುರಿತ ಯಾವುದೇ ಸಾಮಾನ್ಯೀಕರಣಗಳು ಎಷ್ಟೇ ಸಮಂಜಸವೆಂದೆನಿಸಿದರೂ ಅವು ಸರಳೀಕರಣಗೊಂಡಿರಲೇಬೇಕು. 21ನೇ ಶತಮಾನದಲ್ಲಿ ನಾವು ಒಂದು ಸಂಕೀರ್ಣವಾದ ಭೂತಕಾಲದೊಂದಿಗೆ ರಾಜಿ ಒಪ್ಪಂದಗಳನ್ನು ಮಾಡಿಕೊಳ್ಳಬೇಕಾಗಿದೆ.

ಸಮರ್ಥನೆಯಾಗಿದ್ದುದೇನೆಂದರೆ ''ಬಿಳಿಯ ಮನುಷ್ಯರ ಹೊರೆ'' ಎನ್ನುವ ಮಾತುಗಳು. ಪ್ರಜೆಗಳ ಹಿತಾಸಕ್ತಿಗಳನ್ನು ಕಾಪಾಡಲೆಂದೇ ಅವರನ್ನು ತಾವು ಆಳುತ್ತಿದ್ದೇವೆಂದು ತಮಗೆ ತಾವೇ ಮತ್ತು ಪ್ರಜೆಗಳಿಗೆ ನಂಬಿಕೆ ಹುಟ್ಟಿಸಿದರು. ಭಾರತೀಯರನ್ನು ''ನಾಗರೀಕರ''ನ್ನಾಗಿಸುವುದು ಮತ್ತು ಸತಿ, ವಿಧವಾ ಪಟ್ಟದ ಹೇರಿಕೆ ಮತ್ತು ಬಾಲ್ಯ ವಿವಾಹದಂಥ ''ಸಾಮಾಜಿಕ ಪಿಡುಗು''ಗಳನ್ನು ತೊಡೆದುಹಾಕುವ ಧ್ಯೇಯ ಅವರದಾಗಿತ್ತು. ಅಂಥ ''ಪಿಡುಗು''ಗಳಲ್ಲಿ ಅನೇಕವು ಮಹಿಳೆಯರ ಬದುಕಿಗೆ ನಿಕಟವಾಗಿ ಸಂಬಂಧಿಸಿದ್ದವು. ''ಮಹಿಳೆಯರ ಸ್ಥಾನಮಾನ''ವು ನಾಗರಿಕತೆಯ ಸೂಚಿಗಳೆಂದು ಭಾವಿಸಲಾಯಿತು. ಮಹಿಳೆಯರನ್ನು ಕುರಿತ ಕೆಲವು ಕಾಳಜಿಗಳು ಮಾನವೀಯ ದೃಷ್ಟಿಕೋನದವಾಗಿದ್ದರೆ ಮತ್ತೆ ಕೆಲವನ್ನು ಬ್ರಿಟಿಷ್ ಆಡಳಿತದ ಸಮರ್ಥನೆಗಾಗಿ ಬಳಸಿಕೊಳ್ಳಲಾಗಿತ್ತು.

*ಇಂದು ಸತಿ ಪದ್ದತಿ ಮತ್ತು ಬಾಲ್ಯ ವಿವಾಹಗಳ ವಿರುದ್ಧದ ಮತ್ತು ವಿಧವಾ ವಿವಾಹವನ್ನು ಸಮ್ಮತಿಸುವ ಕಾನೂನುಗಳಿವೆ. ಇವು ಪರಿಣಾಮಕಾರಿಯಾಗಿವೆ ಎಂದು ನಿಮಗನ್ನಿಸುವುದೆ? ಸತಿ ಮತ್ತು ಬಾಲ್ಯವಿವಾಹಗಳಂಥ ಕೆಲವು ಆಚರಣೆಗಳು ಕೆಲವು ಪ್ರದೇಶ ಮತ್ತು/ಅಥವಾ ಜಾತಿಗಳಲ್ಲಿರುತ್ತವೆ. ಸತಿಯಂಥ ಘಟನೆಗಳು ವಾಸ್ತವದಲ್ಲಿ ಬೆರಳೆಣಿಕೆಯಷ್ಟು ಮತ್ತು ಇತ್ತೀಚಿನ ವರ್ಷಗಳಲ್ಲಿ ಹಲವು ವರ್ಷಗಳ ಅಂತರದಲ್ಲಿ ಘಟಿಸುತ್ತವೆ. ಆದರೆ ಸತಿ ಆಚರಣೆ ಒಂದು ಸಮಂಜಸವಾದ ಆಯ್ಕೆ ಮತ್ತು ಮಹಿಳೆಯ ಆತ್ಮ ಸಮರ್ಪಣೆಯನ್ನು ಧೀರೋದಾತ್ತವಾದುದೆಂದು ಕಾಣುವಂತೆ ಮಾಡುವ ಧೋರಣೆಗಳು ಇಂದಿಗೂ ಕೂಡ ಆಳವಾಗಿ ಬೇರೂರಿದೆ. ''ಪ್ರೇಮ'' ಮತ್ತು ''ಪ್ರಮಾಣಿಕತೆ'' ಎಂದು ''ಆತ್ಮಾರ್ಪಣೆ'' ಮಾಡುವ ಕ್ರಿಯೆಯಲ್ಲಿ ವಿಧುರರು ಭಾಗವಹಿಸುವುದನ್ನು ಏಕೆ ನಿರೀಕ್ಷಿಸುತ್ತಿಲ್ಲ ಎಂದು ಅಚ್ಚರಿ ಎನಿಸುತ್ತದೆಯೇ?*

## ಹತ್ತೊಂಬತ್ತನೇ ಶತಮಾನದಲ್ಲಿ ಸ್ಥಾನಮಾನದ ಪ್ರಶ್ನೆಯ ಉಗಮ

''ಸ್ಥಾನಮಾನ''ದ ದೃಷ್ಟಿಕೋನಕ್ಕೆ ಒಂದು ನಿಶ್ಚಿತವಾದ ಇತಿಹಾಸವಿದೆ. ಬ್ರಿಟಿಷರು ಭಾರತವನ್ನು ವಸಾಹತು ಪ್ರದೇಶವನ್ನಾಗಿಸಿಕೊಂಡಾಗ ತಮ್ಮ ಪ್ರಜೆಗಳ ಮೇಲೆ ನಿಯಂತ್ರಣ, ಸಂಪರ್ಕ ಮತ್ತು ಸಂವಾದಗಳನ್ನು ಏರ್ಪಡಿಸುವ ಸಾಧನಗಳನ್ನು ಕಂಡುಕೊಳ್ಳುವ ಅಗತ್ಯ ಅವರಿಗಿತ್ತು. ಇದು ದೀರ್ಘಕಾಲಿಕ ಮತ್ತು ಸಂಕೀರ್ಣವಾದ ಪ್ರಕ್ರಿಯೆಯಾಗಿತ್ತು. ಇದು ಸಾಮ್ರಾಜ್ಯದ ಅಸ್ತಿತ್ವದ ಸಮರ್ಥನೆ ಮತ್ತು ಅದಕ್ಕೆ ಕಾನೂನಿನ ಅಂಗೀಕಾರವನ್ನು ಕೊಡುವ ಪ್ರಯತ್ನವನ್ನೂ ಒಳಗೊಂಡಿತ್ತು.

19ನೇ ಶತಮಾನದಲ್ಲಿ ವಸಾಹತುಶಾಹಿಗೆ ಮಹಿಳೆಯರಂಥ ಸಂತೃಪ್ತ ಗುಂಪುಗಳ ಹಿತಾಸಕ್ತಿಯಿಂದಾಗಿ ತಾವು ಆಡಳಿತ ನಡೆಸುತ್ತಿರುವುದಾಗಿ ಚಿತ್ರಿಸಲಾಯಿತು

ಈ ಸಿದ್ಧ ನಂಬಿಕೆಗೆ ಭಾರತೀಯರ (ಅಂದರೆ ಪಾಶ್ಚಿಮಾತ್ಯ ಶಿಕ್ಷಣವನ್ನು ಹೊಂದಿದವರು; ಮಧ್ಯಮ ವರ್ಗದವರು ಮತ್ತು ಮೇಲ್ಜಾತಿಯವರೇ ಹೆಚ್ಚಾಗಿರುವ ಪುರುಷರು) ಪ್ರತಿಕ್ರಿಯೆಗಳು ವೈವಿಧ್ಯಮಯವಾಗಿದ್ದವು. ಒಂದು ಕಡೆ ರಾಮ ಮೋಹನರಾಯ್ ಮತ್ತು ವಿದ್ಯಾಸಾಗರರು ಸಾಮಾಜಿಕ ಸುಧಾರಣೆಯ ಪ್ರಯತ್ನಗಳನ್ನು ನಡೆಸಿದ್ದರೆ, ಇನ್ನೊಂದು ಕಡೆ ಅಂಥ ಸಂಪ್ರದಾಯಗಳನ್ನು ಸಮರ್ಥಿಸಿಕೊಳ್ಳುವ ಅಥವಾ ಅವು ಅಸ್ತಿತ್ವದಲ್ಲಿ ಇಲ್ಲವೇ ಇಲ್ಲ ಎಂದು ವಾದಿಸುವ (ಹಿಂದೆ ಮಹಿಳೆಯರು ಇಂದಿನ

ಪರಿಸ್ಥಿತಿಗೆ ಮತ್ತು ಇತರ ನಾಗರಿಕತೆಗಳಿಗೆ ಹೋಲಿಸಿದರೆ, ಇನ್ನೂ ಉತ್ತಮ ಸ್ಥಿತಿಯಲ್ಲಿದ್ದರೆಂದು ಪ್ರತಿಕ್ರಿಯೆಗಳು ಬರುತ್ತಿದ್ದವು.) ವಿಚಾರಗಳು ಆರ್ಯ ಸಮಾಜದಲ್ಲಿ ಸಾಕಷ್ಟು ಬೆಳದಿದ್ದವು. ಇನ್ನೊಂದು ಹಂತವಾಗಿ ಬಂಕಿಮಚಂದ್ರ ಚಟರ್ಜಿ ಮತ್ತು ರವೀಂದ್ರ ನಾಥ ಟಾಗೋರರಂಥ ಲೇಖಕರ ಕೆಲವು ಕೃತಿಗಳಲ್ಲಿ ಕಾಣಬಹುದು. ಅವರು ರಜಪೂತರ ಕಾಲಕ್ಕೆ ತಮ್ಮ ಕಾದಂಬರಿಗಳನ್ನು ಕೊಂಡೊಯ್ಯುತ್ತಿದ್ದರು. 19ನೇ ಮತ್ತು 20ನೇ ಶತಮಾನದ ಬಂಗಾಳದ ಓದುಗರಿಗೆ ''ವೀರ'' ಪುರುಷರು ಮತ್ತು ಮಹಿಳೆಯರನ್ನು ಮಾದರಿ ಪಾತ್ರಗಳನ್ನಾಗಿ ಚಿತ್ರಿಸುತ್ತಿದ್ದರು.

ಪರಿಣಾಮವಾಗಿ ಪ್ರಾಚೀನ ಕಾಲದ ಆಯ್ದ ವಿಷಯಗಳ ಮೇಲೆ ಬೆಳಕು ಚೆಲ್ಲುವ ಕ್ರಿಯೆ ನಡೆಯಿತು. ಉದಾಹರಣೆಗೆ ಅಪಲಾ ಮತ್ತು ಘೋಷರಂಥ ವೈದಿಕ ದಾರ್ಶನಿಕರು ಇದ್ದರೆನ್ನುವುದನ್ನು ಮಹಿಳೆಯರಿಗೆ ಶಿಕ್ಷಣ ಪಡೆಯಲು ಸಾಧ್ಯವಾಗಿತ್ತೆನ್ನುವುದಕ್ಕೆ ಪುರಾವೆಯಾಗಿ ಬಳಸಿದರೆ, ಋಗ್ವೇದದಲ್ಲಿ ಮಹಿಳೆಯರನ್ನು ಕೊಟ್ಟುಬಿಡಬೇಕಾದ ವಸ್ತುಗಳೆಂದು ಪರಿಗಣಿಸುತ್ತಿದ್ದುದಕ್ಕೆ ಸಿಗುವ ಪುರಾವೆಯನ್ನು ಕಡೆಗಣಿಸಲಾಯಿತು. ಇದನ್ನು ವಸಾಹತುಶಾಹಿಗೆ ಒಂದು ಪ್ರತಿಕ್ರಿಯೆ ಮತ್ತು ವಸಾಹತುಶಾಹಿಯನ್ನ ಸಮರ್ಥಿಸಲು ಬ್ರಿಟಿಷರ ಪ್ರಯತ್ನಗಳು ಎಂದು ನಾವು ಅರ್ಥಮಾಡಿಕೊಳ್ಳಬಹುದಾದರೂ ಅಂಥ ಸರಳೀಕೃತ ಚಿತ್ರಣಗಳಿಗಿಂತ ಒಂದು ಹೆಜ್ಜೆ ಮುಂದೆ ಹೋಗುವ ಅಗತ್ಯ ಈಗಿದೆ. (ವಿಭಾಗ3ರಲ್ಲಿ) ಮಹಿಳೆಯರು ಮತ್ತು ಶಿಕ್ಷಣದ ಪ್ರಶ್ನೆಗೆ ನಾವು ಒತ್ತುಕೊಟ್ಟಾಗಲೂ ಹಿಂದಿನ ಪರಿಸ್ಥಿತಿ ಸಂಕೀರ್ಣವಾಗಿತ್ತೆನ್ನುವುದು ಸ್ಪಷ್ಟವಾಗುತ್ತದೆ. ಕೇವಲ ಬೆರಳೆಣಿಕೆಯಷ್ಟು ಮಹಿಳಾ ದಾರ್ಶನಿಕರ ಹೆಸರುಗಳನ್ನು ಜಪಿಸಿದರೆ ಮಾತ್ರ ಸಾಲದು ಮತ್ತೊಂದು ಹೆಜ್ಜೆ ಮುಂದೆ ಹೋಗುವುದು ಅತ್ಯವಶ್ಯ.

ಪ್ರಾಚೀನ ಭಾರತದ ''ಮಹಿಳೆಯರ ಸ್ಥಾನಮಾನ''ವನ್ನು ನಿರ್ಧರಿಸುವುದೆಂದರೆ ಅದೊಂದು ವ್ಯರ್ಥ ಪ್ರಯತ್ನವೆನ್ನುವುದನ್ನು ಗುರುತಿಸುವುದು ಬಹುಶಃ ಸುಲಭ. ಅಂದಿನ ಲಿಂಗವ್ಯವಸ್ಥೆಯ ಸಂಬಂಧಗಳನ್ನು ಹೆಚ್ಚು ಅರ್ಥಪೂರ್ಣವಾಗಿ ಗ್ರಹಿಸಲು ಪರ್ಯಾಯಗಳನ್ನು ಇಟ್ಟುಕೊಳ್ಳಲು ಮತ್ತು ಅವುಗಳನ್ನು ಬೆಳಸಿ ಮುಂದುವರಿಸಲು ಆರಂಭಿಸಿದ್ದೇವೆ ಮಾತ್ರ. ಈ ಕ್ಷೇತ್ರದಲ್ಲಿರುವ ಸಾಧ್ಯತೆಯ ಒಂದು ಸಣ್ಣ ಮಾದರಿಯನ್ನು ಮುಂದಿನ ಅಧ್ಯಾಯದಲ್ಲಿ ಕೊಡಲು ಹೊರಟಿದ್ದೇವೆ. ಅದು ನಮ್ಮ ಓದುಗರ ಕುತೂಹಲವನ್ನು ಹೆಚ್ಚಿಸಬಹುದು. ಅಲ್ಲದೆ ನಮ್ಮನ್ನು ಕೇವಲ ಸರಳೀಕೃತ ಸಾಧಾರಣೀಕರಣದ ಆಚೆಗೆ ಶ್ರೀಮಂತವಾದ ಮತ್ತು ಹೆಚ್ಚು ಸಂಕೀರ್ಣವಾದ ಮಹಿಳಾ ಇತಿಹಾಸದ ಕಥನದತ್ತ ಹೋಗುವಂತೆ ಮಾಡಬಹುದೆನ್ನುವ ಭರವಸೆಯಿಂದಿದ್ದೇವೆ.

ಇಲ್ಲಿ ಮೂರು ವಸ್ತು ವಿಷಯಗಳ ಮೇಲೆ ಬೆಳಕು ಚೆಲ್ಲುತ್ತೇವೆ. ಮೊದಲನೆಯದು ಮಹಿಳೆಯರ ಮೇಲಿನ ಹಿಂಸೆಯ ಪ್ರಶ್ನೆ. ''ಪ್ರಸ್ತುತ''ವಾದಗಳಲ್ಲನೇಕವು, ಮಹಿಳೆಯರ ಮೇಲಿನ ಹಿಂಸೆಯು ಹೆಚ್ಚುತ್ತಿರುವುದು. ಅವರ ಸ್ಥಾನಮಾನಗಳಲ್ಲಿ ಇಳಿಕೆಯುಂಟಾಗಿರುವುದರ ದ್ಯೋತಕ. ಈ ಹಿಂಸೆ ''ವಿದೇಶೀಯರಿಂದ'' ಉಂಟಾಯಿತೆಂದು ಆರೋಪಿಸುತ್ತವೆ. ಆ ವಿದೇಶೀಯರೆಂದರೆ, ಗ್ರೀಕರು, ಶಕರು, ಕುಶಾನರು, ಹೂಣರು ಮತ್ತು ಪದೇ ಪದೇ ಮುಸ್ಲಿಮರು ಎನ್ನಲಾಗುತ್ತದೆ. ಇವರ ಆಗಮನದಿಂದಾಗಿ ವೈಭವಯುತವಾದ ಪ್ರಾಚೀನಕಾಲದಿಂದ ಮಧ್ಯಯುಗದ ಹೊತ್ತಿಗೆ ಇಳಿಮುಖವಾಯಿತೆನ್ನಲಾಗುತ್ತದೆ. ಆದರೆ ಇದು ಅಷ್ಟು ಸರಳವಾದುದಲ್ಲ ಎಂದು ನಾವು ವಾದಿಸುತ್ತೇವೆ.

ಎರಡನೆಯದಾಗಿ ನಾವು ಮೂಲಭೂತವಾಗಿ ಪ್ರಮುಖ ವಿಷಯದತ್ತ ಗಮನಹರಿಸುತ್ತೇವೆ. ಅಂದರೆ ಉತ್ಪಾದನೆ ಮತ್ತು ಸಂತಾನೋತ್ಪತ್ತಿಯ ಸಂಬಂಧದಂಥ ವಿಷಯಗಳು ಪ್ರಮುಖವಾಗಿ ಕಂಡು ಅವು ಲಿಂಗ ಸಂಬಂಧಗಳನ್ನು ರೂಪಿಸುವಲ್ಲಿ ಎಷ್ಟು ಪ್ರಮುಖ ಪಾತ್ರ ವಹಿಸುತ್ತದೆನ್ನುವುದನ್ನು ತೋರಿಸಬಯಸುತ್ತೇವೆ. ನಾವು ಯಾವ ರೀತಿಯಲ್ಲಿ ಸಂಬಂಧಗಳನ್ನು ಕಲ್ಪಿಸಬಹುದೆನ್ನಲು ಸೂಚ್ಯಾಂಶಗಳನ್ನು ನೀಡಬಹುದೇ ಹೊರತು ತೀರ್ಮಾನಗಳನ್ನಲ್ಲ. ಕೇವಲ ಪಾಂಡಿತ್ಯಪೂರ್ಣ ವಿಶ್ಲೇಷಣೆಯ ಅಗತ್ಯವಿರುವ ಕ್ಷೇತ್ರಗಳ ಕಡೆ ಗಮನ ಸೆಳೆಯಬಹುದು.

ಅಂತಿಮವಾಗಿ ಶಿಕ್ಷಣ ಮತ್ತು ಕಲಿಕೆಯ ಪ್ರಶ್ನೆಯ ಕಡೆ ನೋಡಿದರೆ, ಇತಿಹಾಸದ ವಿದ್ಯಾರ್ಥಿಗಳು ಮತ್ತು ಅಧ್ಯಾಪಕರಾಗಿ ನಮಗೆ ಇವು ತಕ್ಷಣದ ಆಸಕ್ತಿಯ ಪ್ರಶ್ನೆಗಳಾಗುತ್ತವೆ. ಇವು ಸಿದ್ಧ ಮಾದರಿಗಳಿರುವ ಕ್ಷೇತ್ರಕೂಡ. ಗಾರ್ಗಿ, ಮೈತ್ರೇಯಿ, ಅಪಲಾ ಮತ್ತು ಘೋಷಾರ ಹೆಸರುಗಳನ್ನು ಕೇಳಿದ್ದೇವೆ. ಈ ಅಸಾಧಾರಣ ಮಹಿಳಾ ದಾರ್ಶನಿಕರನ್ನು ಸಾಂದರ್ಭೀಕರಣಗೊಳಿಸುವ ಅಗತ್ಯವಿದೆ. ಅಲ್ಲದೆ ಶಿಕ್ಷಣ ಎಂದರೆ ಸಾಮಾನ್ಯ ಪುರುಷ ಮತ್ತು ಮಹಿಳೆಯರಿಗೆ ಏನಾಗಿತ್ತು ಎಂದು ತಿಳಿಯಲು ನಾವು ಮತ್ತಷ್ಟು ದೂರ ನೋಡಬೇಕಾಗಿದೆ.

## ನಮ್ಮ ಆಧಾರ ಗ್ರಂಥಗಳು

ಪ್ರಾಚೀನ ಭಾರತದ ಇತಿಹಾಸಕಾರರು ಪುರಾತತ್ವಶಾಸ್ತ್ರೀಯ ಆಧಾರಗಳು ಮತ್ತು ಶತಮಾನಗಳ ಕಾಲದಿಂದ ರಚಿತವಾದ, ಸಂಗ್ರಹಿಸಲಾದ ಮತ್ತು ಪ್ರಖ್ಯಾತವಾದ ಗ್ರಂಥಗಳನ್ನು ಅವಲಂಬಿಸಿದ್ದರು. ಪುರಾತತ್ವ ಶಾಸ್ತ್ರವು ಹರಪ್ಪ ಸಂಸ್ಕೃತಿಯ ಮೇಲೆ ಮಹತ್ವದ ಬೆಳಕನ್ನು ಚೆಲ್ಲುತ್ತದೆಯಾದರೂ ಅಂಕಿಅಂಶಗಳ ಕೊರತೆಯಿಂದಾಗಿ ಮುಂದಿನ ಹಂತದ ಇತಿಹಾಸ ರಚನೆಗೆ ಅಷ್ಟು ಉಪಯುಕ್ತವೆನಿಸುವುದಿಲ್ಲ. ನಾವು ಶಾಸನಗಳನ್ನು ಅವಲಂಬಿಸುತ್ತೇವೆ. ಶಾಸನಗಳು ಮತ್ತು ಗ್ರಂಥಗಳು ಸುದ್ದಿ ಭಂಡಾರವನ್ನೇ ಒದಗಿಸುತ್ತವೆಯಾದರೂ ಅಲ್ಲಿ ಸಮಸ್ಯೆಗಳಿವೆ. ಮೊದಲನೆಯದಾಗಿ ಸಾಕ್ಷರತೆ ನಿರ್ಬಂಧಕ್ಕೊಳಗಾಗಿತ್ತು ಎನ್ನುವುದನ್ನು ನಾವು ನೆನಪಿನಲ್ಲಿಡಬೇಕು. ಈಗಿರುವಂತೆ ಗ್ರಂಥಗಳು ಸಾಕ್ಷರವರ್ಗದ ಕಾಳಜಿಗಳು ಮತ್ತು ದೃಷ್ಟಿಕೋನಗಳನ್ನು ಹೆಚ್ಚು ಸಂದರ್ಭಗಳಲ್ಲಿ ಪ್ರತಿನಿಧಿಸುತ್ತವೆ.

ಅಲ್ಲದೆ, ಸಾಮಾನ್ಯವಾಗಿ ಗ್ರಂಥಗಳು ವೈದಿಕವಾದ ಹಿಂದೂ ಧರ್ಮ, ಬೌದ್ಧ ಧರ್ಮ ಮತ್ತು ಜೈನ ಧರ್ಮಗಳಂಥ ಧಾರ್ಮಿಕ ಸಂಪ್ರದಾಯಗಳ ಆಶ್ರಯದಲ್ಲಿ ಉಳಿದುಕೊಂಡು ಬಂದಿರುತ್ತವೆ.

ನಾವು ಮಹಿಳೆಯರ ಇತಿಹಾಸವನ್ನು ಪುನರ್ ರಚಿಸುತ್ತಿದ್ದೇವೆನ್ನುವುದನ್ನು ನೆನಪಿನಲ್ಲಿಡಬೇಕಾದುದು ಅವಶ್ಯ. ಅದನ್ನು

-ಹೆಚ್ಚಿನ ಸಂದರ್ಭಗಳಲ್ಲಿ ಪುರುಷರು ಅದರಲ್ಲೂ ಮೇಲ್ಜಾತಿಯ/ವರ್ಗಗಳ ಪುರುಷರು, ಸೃಷ್ಟಿಸಿದ, ಜತನ ಮಾಡಿದ ಮತ್ತು ಪ್ರಚುರಪಡಿಸಿದ ದಾಖಲೆಗಳಿಂದ ರಚಿಸುತ್ತೇವೆ.

ಇದರಲ್ಲಿ ಎದ್ದು ಕಾಣುವ ಸಮಸ್ಯೆಗಳಿವೆ. ಸಾಪೇಕ್ಷವಾಗಿ ನಮಗೆ ಬಹು ಸಂಖ್ಯಾತ ಮಹಿಳೆಯರಿಗಿಂತಲೂ ಶ್ರೀಮಂತ ಹಾಗೂ ಉನ್ನತ ಸ್ಥಾನಮಾನವನ್ನು ಹೊಂದಿರುವವರ ಬಗ್ಗೆ ಹೆಚ್ಚು ತಿಳಿದಿದೆ. ಆದ್ದರಿಂದ ಸಾಮಾನ್ಯ ಮಹಿಳೆಯರೆಲ್ಲರ ಬಗ್ಗೆ ಮಾತಾಡುತ್ತಿದ್ದೇವೆಂದು ಹೇಳುವಂತಿಲ್ಲ.

ನಾವು ಇತರ ವರ್ಗಗಳ ಮಹಿಳೆಯರ ಇತಿಹಾಸಗಳನ್ನು ರಚಿಸಲು ಪ್ರಯತ್ನಿಸುವಾಗ ಪರೋಕ್ಷ ಪುರಾವೆಗಳನ್ನು ಬಹಳ ಎಚ್ಚರಿಕೆಯಿಂದ ನೋಡಬೇಕು. ನಾವು ಯಾವುದು ಸಾಧ್ಯ ಅಥವಾ ಸಂಭವನೀಯ ಎಂದು ಹೇಳಬಹುದೇ ಹೊರತಾಗಿ ನಿಶ್ಚಿತವಾಗಿ ಏನನ್ನೂ ಹೇಳಲಾಗುವುದಿಲ್ಲ.

"ವಿಮೆನ್ ಇನ್ ಅರ್ಲಿ ಇಂಡಿಯಾ" *ಭಾಗ - 1*

ಕನ್ನಡಕ್ಕೆ : ವೆಂ.ವನಜ

# ಇದು ಯಾರ ಕೆಲ್ಸ ....... ?

"ನೀನು ಊಟ ಮಾಡಿದ ತಟ್ಟೆ ನೀನೆ ತೆಗೆಯೋ" ಎಂಬ ಮಾತಿನೊಂದಿಗೆ ನಾನು ಪ್ರಾರಂಭಿಸಿದೆ. ನನ್ನ ತಮ್ಮ ಕೈ ತೊಳೆದುಕೊಂಡು ಬಂದು ಕುಳಿತುಕೊಂಡು ಅಮ್ಮನಿಗೆ ಊಟ ಬಡಿಸುವಂತೆ ಕೇಳಿದ. ಅಮ್ಮ ಸುಸ್ತಾಗಿ ಮಲಗಿದ್ದಳು ಆದ್ರೂ ಎದ್ದು ಊಟ ಬಡಿಸಿದಳು, ನೀರು ತಂದಿಟ್ಟು ಮತ್ತೆ ಮಲಗಿದಳು. ಇದು ಮೊದಲಿನಿಂದಲೂ ನಮ್ಮ ಮನೆಯಲ್ಲಿ ನಡೆದುಕೊಂಡು ಬಂದಿದ್ದ ರೂಢಿಯೇ ಆಗಿತ್ತು. ಆ ದಿನ ನಾನು ತುಂಬಾ ಸುಸ್ತಾಗಿ ಕೆಲ್ಸದಿಂದ ಬಂದು ಕುಳಿತಿದ್ದೆ. ಆದ್ರೆ ನಾನು ಅಮ್ಮನ ಸ್ಥಿತಿ ನೋಡಿ ಊಟ ಬಡಿಸು ಎಂದು ಕೇಳ್ಲಿಲ್ಲ ನಾನೇ ಬಡಿಸಿಕೊಂಡು ಊಟ ಮಾಡಿದ್ದೆ. ಊಟ ಮಾಡಿದ ನಂತರ ಅವನು ತಿಂದ ತಟ್ಟೆಯನ್ನು ತೆಗೆಯದೆ ಅದನ್ನು ಅಮ್ಮನೋ ಅಥವಾ ನಾನೋ ತೆಗೆಯಲಿ ಎಂದು ಎದ್ದು ಹೋದದ್ದು ನನಗೆ ಬಹಳ ಕೋಪ ತರಿಸಿತ್ತು. ತಕ್ಷಣ ನಾನು,

ಯಾಕೋ ನಿನ್ನ ತಟ್ಟೆ ನೀನೆ ತೆಗೆಯೋಕೆ ಆಗಲ್ವಾ ? ಎಂದೆ

ನಿನಗೇನು ನಾನು ತೆಗಿ ಅಂತ ಹೇಳಿದ್ನಾ ?

ಇಲ್ಲ

ಮತ್ತೆ ಬಿಡು ಅಮ್ಮ ತೆಗೆಯುತ್ತಾರೆ

ಯಾಕೆ ನೀನು ತೆಗೆದ್ರೆ ಏನಾಗುತ್ತೆ ?

ಜಾಸ್ತಿ ಮಾತನಾಡಬೇಡ ಅದು ನನ್ನಿಷ್ಟ.

ನಿನ್ನಿಷ್ಟ ಅಂದ್ರೆ, ನಾವೇನು ನಿಮ್ಮ ಸೇವೆ ಮಾಡುವ ಆಳುಗಳಾ ?

ನಾನೇನು ನೀವು ಆಳುಗಳು ಅಂತ ಹೇಳಿಲ್ಲ.

ಹೇಳಿಲ್ಲ ಆದ್ರೆ ನೀನು ಮನೆಯಲ್ಲಿ ಅಮ್ಮ, ನನ್ನ ಹತ್ತಿರ ನಡೆದುಕೊಳ್ಳುವ ರೀತಿ ಹಾಗೆ ಇದೆ.

ಹೀಗೆ ಸುಮಾರು ಹೊತ್ತು ಮಾತನಾಡಿದರೂ ಏನು ಪ್ರಯೋಜನವಾಗಲಿಲ್ಲ. ಕೊನೆಗೂ ಅವನು ತಟ್ಟೆ ತೆಗೆಯದೆ ಹೊರಟು ಹೋದ ಎಂದಿನಂತೆ ಅಮ್ಮನೆ ತಟ್ಟೆ ತೆಗೆದಳು. ಆದರೂ ಇದು ಅಲ್ಲಿಗೆ ಕೊನೆಯಾಗಲಿಲ್ಲ. ಇದು ನಮ್ಮ ಮನೆಯಲ್ಲಿ ದಿನ ನಿತ್ಯದ ಪೇಚಾಟವೇ ಆಗಿತ್ತು. ಇದು ಕೇವಲ ನನ್ನ ಮತ್ತು ತಮ್ಮನ ಜಗಳ ಮಾತ್ರವೇ ? ಅಥವಾ ನಮ್ಮ ಮನೆಯಲ್ಲಿ ಮಾತ್ರ ಈ ರೀತಿಯಾಗುತ್ತಿದಿಯೋ ? ಇದು ಕೇವಲ ಹೆಂಗಸರು ಮಾಡುವ ಕೆಲ್ಸ ಮಾತ್ರವೇನೋ ?

ಈ ಕೆಲಸ ಹೆಂಗಸರಿಗೆ ಈ ಕೆಲಸ ಗಂಡಸರಿಗೆ ಎಂಬುದು ಮೊದಲಿನಿಂದಲೂ ನಡೆದು ಬರುತ್ತಿದೆಯೇ ? ಇದು ಯಾರು ಮಾಡಿದ ಕಲ್ಪನೆ ? ಮನೆ ಕೆಲಸ ಮಾಡುವುದು ಗಂಡಸರಿಗೆ ಅವಮಾನವೇ ? ಗಂಡಸರು ಹೊರಗೆ ದುಡಿದು ಬಂದು ಮನೆಯಲ್ಲಿ ಕೆಲ್ಸ ಮಾಡಬಾರದು ಎಂದಿದ್ದರೆ ಒಬ್ಬ ಮಹಿಳೆ ಹೊರಗಡೆ ಬೆಳಗ್ಗೆಯಿಂದ ಸಂಜೆಯವರೆಗೂ ದುಡಿದಿದ್ದು ಮನೆಗೂ ಬಂದು ಕೆಲ್ಸ ಮಾಡಬೇಕೆ ? ಇತ್ಯಾದಿ ಪ್ರಶ್ನೆಗಳು ಒಟ್ಟೊಟ್ಟಿಗೆ ನನ್ನನ್ನು ಆವರಿಸತೊಡಗಿದವು.

ನನ್ನ ತಮ್ಮ ಒಂದು ದಿನ ಊಟ ಬಡಿಸಿಲ್ಲ ಎಂಬ ಕಾರಣಕ್ಕೆ ಊಟ ಬಿಟ್ಟು ಮಲಗಿದ್ದೂ ಉಂಟು. ಆಗ ಅಮ್ಮ ನೊಂದುಕೊಂಡು ಇದಕ್ಕೆಲ್ಲ ಕಾರಣ ನಿನ್ನ ಮಾತುಗಳು ಎಂದು ಬಯ್ದಿದ್ದು ಉಂಟು.

ಮನೆಗಳಲ್ಲಿ ಚಿಕ್ಕ ವಯಸ್ಸಿನಿಂದಲೇ ಇದು ಗಂಡು ಮಕ್ಕಳು ಮಾಡಬಾರದು, ಇದು ಹೆಣ್ಣು ಮಕ್ಕಳ ಕೆಲ್ಸ ಎಂದು ಬೀಜವನ್ನು ಬಿತ್ತು ಬಿಡುತ್ತಾರೆ. ಇದು ಮುಂದೆ ಗಿಡವಾಗಿ ಬೆಳೆದು, ಮರವಾದಾಗ ಬಗ್ಗು ಎಂದರೆ ಬಗ್ಗೀತೆ ? ಚಿಕ್ಕ ವಯಸ್ಸಿನಲ್ಲಿ ಗಂಡು ಮಕ್ಕಳು ಪಾತ್ರೆ ತೊಳೆಯಬಾರದು, ಕಸ ಗುಡಿಸಬಾರದು, ಹೆಣ್ಣು ಮಗಳು ಮನೆಯ ಎಲ್ಲ ಕೆಲಸವನ್ನೂ ಮಾಡಬೇಕು. ಹೀಗೆ ಅದು ಒಂದು ಅವಧಿಯಲ್ಲಿ ಈ ಕೆಲ್ಸ ಹೆಂಗಸು ಮಾಡುವುದು, ಇದು ಗಂಡಸು ಮಾಡಬಾರದ ಕೆಲ್ಸ ಎಂಬುದು ಭದ್ರವಾಗಿ ಬೆಳೆದುಬಿಡುತ್ತದೆ.

ಮತ್ತೊಂದು ದಿನ ಅವನು ನನಗೆ ಊಟ ಬೇಡ ಏನು ಯಾವಾಗಲೂ ಇದೇ ಗೋಳು ಎಂದು ಊಟ ಮಾಡದೆ ಹೊರಡಲು ನಿಂತಾಗ ನಾನು,

ಅಲ್ವೊ ನೀನು ತಿನ್ನಲು ಬಡಿಸಿಕೊಳ್ಳೋಕೆ ನಿನಗೆ ಬೇಸರ ಅಂದ್ರೆ, ನಾವು ನಿನಗೆ ಬಡಿಸೋಕೆ ನಮಗೆ ಬೇಸರ ಆಗಲ್ವಾ ? ಎಂದೆ,

ಅದಕ್ಕೆ ಸ್ವಲ್ಪ ಹೊತ್ತು ಸುಮ್ಮನೆ ಇದ್ದು ನಂತರ ಹೊರಗಡೆ ಹೊರಟೆ ಹೋದ ಅದಕ್ಕೂ ಅಮ್ಮ ನನ್ನನ್ನು ಬಯ್ದಿದ್ದಳು

ಅದಕ್ಕೆ ನಾನು

ಇದಕ್ಕೆಲ್ಲಾ ಕಾರಣ ನೀನೆ ಅಮ್ಮ ನೀನು ಅವನು ಕೇಳಿದ ತಕ್ಷಣ ಊಟ ಬಡಿಸುವುದು, ಅವನು ಎಲ್ಲಿ ಊಟ ಬಿಡುತ್ತಾನೇ ಅಂತ ಹೆದರಿಕೊಂಡು ನೀನು ಸುಸ್ತಾಗಿದ್ದರೂ ಅವನ ಸೇವೆ ಮಾಡೋದೆ ಅವನು ಈ ರೀತಿ ಮಾಡಲು ಕಾರಣ ಎಂದಿದ್ದೆ.

ಇದನ್ನು ಇಲ್ಲಿಗೆ ನಿಲ್ಲಿಸಲಿಲ್ಲ. ಪುನಃ ಪ್ರಯತ್ನಿಸುತ್ತಲೇ ಇದ್ದೆ. ಹೀಗೆ ಒಮ್ಮೆ ಅವನೊಂದಿಗೆ ಕುಳಿತು ಮಾತನಾಡಿದೆ. 'ಅಮ್ಮನು ಬೆಳಗಿನಿಂದ ದುಡಿದು ದಣಿದಿರುತ್ತಾಳೆ ನೀನು ರಾತ್ರಿ 9-00 ಅಥವಾ 10-00 ಗಂಟೆಗೂ ಬಂದು ಊಟ ಬಡಿಸು ಅಂತ ಕೇಳಿದ್ರೆ ಅಮ್ಮನಿಗೆ ಎಷ್ಟು ಕಷ್ಟ ಆಗುತ್ತೆ ಯೋಚಿಸು' ಎಂದೆ. ನೀನು ಮನೆಯಲ್ಲಿ ಅಡುಗೆ ಮಾಡು ಅಂತ ಕೇಳುತ್ತಿಲ್ಲ ನಿನ್ನ ಕೆಲ್ಸ ನೀನೆ ಮಾಡಿಕೋ ಊಟ ಬಡಿಸಿಕೊಳ್ಳೊದು, ಅಮ್ಮನಿಗೆ ನೀರು ತಂದು ಕೊಡುವುದು ಹೀಗೆ ಸಣ್ಣಪುಟ್ಟ ಕೆಲ್ಸ ಮಾಡಿದ್ರೆ ಸಾಕು ಎಂದೆ.

ಇದು ಅವನನ್ನು ಸಂಪೂರ್ಣವಾಗಿ ಬದಲಾಯಿಸದಿದ್ದರೂ ಸ್ವಲ್ಪ ಮಟ್ಟಿಗೆ ಪರಿಣಾಮ ಬೀರಿತ್ತು. ಈಗ ಅವನ ಊಟ ಅವನೆ ಬಡಿಸಿಕೊಳ್ಳುತ್ತಾನೆ, ನೀರು ಹಿಡಿಯುತ್ತಾನೆ ಒಮ್ಮೊಮ್ಮೆ ಬೇಗ ಬಂದ್ರೆ ಅಂಗಡಿಗೂ ಹೋಗಿ ಬರುತ್ತಾನೆ. ಅಮ್ಮನಿಗೂ ಇದರಿಂದ ಖುಷಿಯಾಗಿದೆ. ನನಗೂ ಇಷ್ಟು ದಿನ ಮಾಡಿದ ಪ್ರಯತ್ನ ವ್ಯರ್ಥವಾಗಲಿಲ್ಲವೆಂಬ ಸಮಾಧಾನ ಸಿಕ್ಕಿತು.

ಇದು ನನ್ನ ತಮ್ಮನೊಬ್ಬನ, ಅಥವಾ ಇದೇ ರೀತಿ ಇರುವ ಅಪ್ಪ-ಅಣ್ಣನ ತಪ್ಪಲ್ಲ, ಮೊದಲಿನಿಂದಲೂ ಇದು ಹೆಣ್ಣು ಮತ್ತು ಗಂಡು ಮಕ್ಕಳ ಕೆಲ್ಸಗಳೆಂದು ಬೇರ್ಪಡಿಸಿ ಹಂಚಿರುವ ಸಮಾಜದ್ದೂ ತಪ್ಪು ಎನ್ನಬಹುದು. ಯಾವ ಕೆಲ್ಸವಾದರೇನು ಅದು ಗಂಡು-ಹೆಣ್ಣು ಇಬ್ಬರೂ ಸಮಾನವಾಗಿ ಹಂಚಿಕೊಂಡು ಮಾಡಿದರೆ ಯಾವುದೇ ಕೆಲ್ಸವು ಇದು ಮೇಲು ಇದು ಕೀಳು ಎಂಬುದು ಇರುವುದಿಲ್ಲ.

- ಲಕ್ಷ್ಮಿ

# ವಸುಧಾ - ಲೇಖನ ಸಹೇಲಿ ಪ್ರತಿಕ್ರಿಯೆ

ಇತ್ತೀಚೆಗೆ ಹಿಂದೂ ಪತ್ರಿಕೆಯಲ್ಲಿ ವಸುಧಾ ದಾಗಮ್‌ವಾರ್ ಎಂಬುವರು ಬರೆದ ಗುಜರಾತ್ ಕ್ಯಾಂಪ್‌ಗಳಲ್ಲಿ ಮಹಿಳೆಯರು ಎಂಬ ಲೇಖನವನ್ನು ಎರಡು ಕಂತುಗಳಲ್ಲಿ ಪ್ರಕಟಿಸಲಾಗಿತ್ತು. ರಾಷ್ಟ್ರೀಯ ಆಯೋಗದ ಸದಸ್ಯೆಯಾಗಿ ಗುಜರಾತ್ ಕ್ಯಾಂಪ್‌ಗಳಿಗೆ ಈಕೆ ಭೇಟಿ ನೀಡಿ ಬರೆದ ಆ ಲೇಖನದ ಬಗ್ಗೆ ಸ್ತ್ರೀವಾದಿ ಸಂಘಟನೆಯ ಮಹಿಳೆಯರು ಕಟು ಟೀಕೆಯನ್ನು ಮಾಡಿರುವುದಲ್ಲದೆ, ಸತ್ಯ ಶೋಧನೆಗಾಗಿ ಹೋದ ಈಕೆ ಸಂದರ್ಭವನ್ನು ಸಂಘ ಪರಿವಾರದ ಧೋರಣೆಯನ್ನು ಎತ್ತಿ ಹಿಡಿಯಲು ಬಳಸಿಕೊಂಡಿರುವುದರ ಬಗ್ಗೆ ತಮ್ಮ ಆಕ್ರೋಶವನ್ನು ವ್ಯಕ್ತಪಡಿಸಿದ್ದಾರೆ. ಈ ಹಿನ್ನಲೆಯಲ್ಲಿ ವಸುಧಾರವರ ಲೇಖನಕ್ಕೆ ಸಹೇಲಿಯವರು (ದೆಹಲಿಯ ಸ್ವಾಯತ್ತ ಮಹಿಳಾ ಸಂಘಟನೆ) ಬರೆದ ಪ್ರತಿಕ್ರಿಯೆಯನ್ನು ಸಂಕ್ಷಿಪ್ತಗೊಳಿಸಲಾಗಿದೆ.

ಭಾರತದಲ್ಲಿ ಮಹಿಳಾ ಚಳುವಳಿಯ ಪ್ರಾರಂಭದ ದಿನಗಳಲ್ಲಿ ಪೋಲಿಸ್ ಠಾಣೆಯಲ್ಲಿ ಅತ್ಯಾಚಾರಕ್ಕೆ ಒಳಗಾದ ಮಥುರಾ ಘಟನೆ ಕುರಿತು ಸುಪ್ರೀಂ ಕೋರ್ಟ್ ನೀಡಿದ ತೀರ್ಪು ಮಹಿಳಾ ಚಳುವಳಿಯ ಬಿರುಸಿಗೆ ಒಂದು ಹೊಸ ಚಾಲನೆಯನ್ನು ನೀಡಿತ್ತು. ನಾಲ್ಕು ಜನ ಮಹಿಳಾ ನ್ಯಾಯವಾದಿಗಳು ಸುಪ್ರೀಂ ಕೋರ್ಟ್ ನೀಡಿದ ತೀರ್ಪನ್ನು ಪ್ರತಿಭಟಿಸಿ ಮುಕ್ತ ಪತ್ರವನ್ನು ಬರೆದರು. ಈ ನಾಲ್ವರಲ್ಲಿ ಒಬ್ಬಾಕೆ ವಸುಧಾ ಮಹಿಳಾ ಕಾರ್ಯಕರ್ತೆಯಾದ ಈಕೆ ನೂರಾರು ಮಹಿಳೆಯರು ಅವಮಾನುಪವಾದ ಕೊಲೆ, ಅತ್ಯಾಚಾರಕ್ಕೆ ಬಲಿಯಾದ ಸಂದರ್ಭದಲ್ಲಿ ಈ ಘಟನೆಯನ್ನು ಖಂಡಿಸದೇ ಇರುವುದು ನಾಚಿಕೆಗೇಡಿನ ಸಂಗತಿಯಾಗಿದೆ. ಗುಜರಾತ್ ಕ್ಯಾಂಪ್‌ಗಳಲ್ಲಿ ನೊಂದ ಮಹಿಳೆಯರ ಸ್ಥಿತಿ ಗತಿಯನ್ನು ಅರಿಯಲು ಹೋದ ಈಕೆ ನೊಂದ ಮಹಿಳೆಯರ ಸ್ಥಿತಿಗತಿಯನ್ನು ಕುರಿತು ಬರೆಯುವುದನ್ನು ಬಿಟ್ಟು ಗುಜರಾತ್‌ನಲ್ಲಿ ನಡೆದ ನರ ಮೇಧವನ್ನು ಸಮರ್ಥಿಸತೊಡಗಿರುವುದು ವಿಪರ್ಯಾಸದ ಸಂಗತಿಯಾಗಿದೆ. ಈ ಲೇಖನದ ಎರಡೂ ಭಾಗದಲ್ಲಿ ಎಲ್ಲೂ ಮಹಿಳೆಯರ ಬಗ್ಗೆ ಬರೆಯಲಾಗಿಲ್ಲ.

ಲೇಖನದಲ್ಲಿ ಅಸ್ಪಷ್ಟವಾದ, ಅಸಂಬದ್ಧವಾದ ವಾದ ಸರಣಿಯನ್ನು ಬಳಸಲಾಗಿದೆ. ಗುಜರಾತ್‌ನಲ್ಲಿ ನಡೆದ ಘಟನೆಯನ್ನು ಎರಡು ಜನಾಂಗಗಳ ನಡುವೆ ನಡೆದ ರೈಯಟ್ ಎಂದು ವಿವರಿಸಲಾಗಿದೆ. ಆದರೆ ಗುಜರಾತ್‌ನಲ್ಲಿ ನಡೆದಿದ್ದು ಗಲಭೆಯಲ್ಲ. ಅದು ಉದ್ದೇಶಪೂರ್ವಕವಾಗಿ ಆಯೋಜಿತವಾದ ಹಿಂಸೆ, ಗುಜರಾತ್‌ಗೆ ಭೇಟಿ ನೀಡುವಾಗ ಮೋದಿ ನಮ್ಮ ಮುಖ್ಯ ಕಾಳಜಿಯಾಗಿರಲಿಲ್ಲ ಎಂದು ಹೇಳುತ್ತಾ ಗುಜರಾತ್‌ನಲ್ಲಿ ನಡೆದ ಮಾರಣಹೋಮದಲ್ಲಿ ಸರ್ಕಾರದ ಪಾತ್ರವನ್ನು ಉದ್ದೇಶ ಪೂರ್ವಕವಾಗಿ ಕ್ಷೀಣಗೊಳಿಸಿದ್ದಾರೆ. ಕೇವಲ ರಾಜ್ಯದ ಪೊಲೀಸರನ್ನು ಮಾತ್ರ ಜವಾಬ್ದಾರರನ್ನಾಗಿ ಮಾಡಲಾಗಿದೆ. ಈ ಪೊಲೀಸರು ರಾಜ್ಯದ ಆಡಳಿತದ ಭಾಗವಲ್ಲವೆ? ನೊಂದ ಮಹಿಳೆಯರ ರಕ್ಷಣೆಗೆ ಪೊಲೀಸರು ಹಿಂದೇಟು ಹಾಕಿದ್ದರೆ, ಅಥವಾ ನಿರ್ಲಕ್ಷಿಸಿದ್ದರೆ, ಅದಕ್ಕೆ ಉತ್ತರ ಕೊಡಬೇಕಾಗಿರುವುದು ಮೋದಿ ಸರ್ಕಾರವಲ್ಲವೆ? ಸತ್ಯಶೋಧನೆಗಾಗಿ ಹೋದವರು ಸರ್ಕಾರದ ನಿರ್ಲಕ್ಷ ಧೋರಣೆಯ ಬಗ್ಗೆ ಯಾವುದೇ ನೇರವಾದ ಸಾಕ್ಷಿಯನ್ನು ಸಂಗ್ರಹಿಸದೇ ಇರುವುದನ್ನು ಹೇಗೆ ಸಮರ್ಥಿಸಿ ಕೊಳ್ಳಲು ಸಾಧ್ಯ?

ಗುಜರಾತ್‌ನಲ್ಲಿ ನಡೆದ ಈ ನರಮೇಧದ ಸಂದರ್ಭದಲ್ಲಿ ಸುಮಾರು ಮೂವತ್ತು ಸ್ವಯಂ ಸೇವಾ ಸಂಸ್ಥೆಗಳು ಕೆಲಸ ಮಾಡುತ್ತಿದ್ದವು. ಆದರೆ ಗುಜರಾತ್‌ನಲ್ಲಿ ಸಹಕಾರಿ ಕ್ಷೇತ್ರದಲ್ಲಿ ಕ್ರಿಯಾಶೀಲವಾಗಿ ಕೆಲಸ ಮಾಡುತ್ತಿರುವ 'ಸೇವಾ' ಇದರ ಭಾಗವಾಗಿರಲಿಲ್ಲ. ಇದು ಮಹಿಳೆಯರ ಪರವಾಗಿ ಯೋಚಿಸುವವರನ್ನೆಲ್ಲಾ ಆಶ್ಚರ್ಯಗೊಳಿಸಿತು. ಈ ಸಂದರ್ಭದ ಸ್ಥಿತಿಯನ್ನು ಭೂಕಂಪನದ ಸ್ಥಿತಿಗೆ ಹೋಲಿಸಿರುವುದು ಮತ್ತಷ್ಟು ಆಶ್ಚರ್ಯಕರವಾದುದು. ಹೀಗೆ ಹೋಲಿಕೆ ಮಾಡುವುದರ ಮೂಲಕ ಒಂದು ಮುಖ್ಯವಾದ ಅಂಶವನ್ನು ಮರೆ ಮಾಡಲಾಗಿತ್ತು. ಒಂದು ಜನಾಂಗದ ಹೆಣ್ಣುಮಕ್ಕಳ ಮೇಲೆ ನಡೆದ ಲೈಂಗಿಕ ಹಿಂಸೆ ದೌರ್ಜನ್ಯ ನೈಸರ್ಗಿಕವಾದ ಭೂಕಂಪನದ ಪರಿಣಾಮಕ್ಕಿಂತ ಭಿನ್ನವಾದುದು. ಲೇಖಕಿಯ ಈ ಧೋರಣೆಯಿಂದಾಗಿ ಲೇಖನದ ಉದ್ದೇಶ ಗುಜರಾತ್‌ನಲ್ಲಿ ನಡೆದ ನರಮೇಧ ಮಹಿಳೆಯರ ಮೇಲೆ ಉಂಟು ಮಾಡಿದ ಪರಿಣಾಮದ ವಾಸ್ತವಾಂಶವನ್ನು ಬೆಳಕಿಗೆ ತರುವುದಾಗಿತ್ತೆ? ಅಥವಾ ಆಡಳಿತವರ್ಗವನ್ನು ಸಮರ್ಥಿಸುವುದಾಗಿತ್ತೆ ಎಂಬ ಅನುಮಾನ ನಮ್ಮನ್ನು ಕಾಡುತ್ತಿದೆ.

ಕ್ಯಾಂಪ್‌ನಲ್ಲಿ ಮಹಿಳೆಯರನ್ನು ಭೇಟಿ ಮಾಡಿದಾಗ ಕೇವಲ ಮೂರು ಜನ ಮಹಿಳೆಯರು ಮಾತ್ರ ಅತ್ಯಾಚಾರಕ್ಕೆ ಒಳಗಾಗಿರುವುದನ್ನು ಒಪ್ಪಿಕೊಂಡರು ಎಂದು ಹೇಳುವುದು ತುಂಬಾ ಅಸಂಬದ್ಧವಾಗಿದೆ. ನೂರಾರು ಹೆಂಗಸರು ಪೊಲೀಸ್ ಸ್ಟೇಷನ್‌ನಲ್ಲಿ ಎಫ್.ಐ.ಆರ್ ಫೈಲ್ ಮಾಡಲು ಸಾಧ್ಯವಾಗದೇ

ಇರುವ ನೈಜ ಸತ್ಯ ನಮ್ಮ ಮುಂದಿರುವಾಗ ನಿಖರವಾಗಿ ಎಷ್ಟು ಮಹಿಳೆಯರು ಅತ್ಯಾಚಾರಕ್ಕೆ ಒಳಗಾಗಿದ್ದಾರೆ ಎಂದು ಹೇಳುವುದು ಎಷ್ಟು ಮುಖ್ಯವಾಗುತ್ತದೆ. ಇತರ ಸತ್ಯ ಶೋಧನಾ ವರದಿಗಳಲ್ಲಿ ಅತ್ಯಾಚಾರಕ್ಕೆ ಒಳಗಾದ ಮಹಿಳೆಯರ ಸತ್ಯಕತೆಗಳನ್ನು ಸೆನ್‌ಶೇಷನಲ್ ಎಂದು ಕರೆದಿರುವುದು ಇದುವರೆಗಿನ ಮಹಿಳಾ ಚಳುವಳಿಯ ಅನುಭವವನ್ನು ನಿರಾಕರಿಸಿದಂತಾಗುತ್ತದೆ.

ಕ್ಯಾಂಪ್‌ನಲ್ಲಿದ್ದ ಮಹಿಳೆಯರನ್ನು ಮಾತನಾಡಿಸಿದಾಗ ಅವರು ತಮ್ಮ ಮನಸ್ಸಿನಲ್ಲಿದ್ದುದನ್ನು ಹೇಳುತ್ತಿರುವುದಕ್ಕಿಂತ ಅವರ ಗಂಡಸರು ತೆಗೆದುಕೊಂಡ ನಿರ್ಧಾರವನ್ನು ಪರೋಕ್ಷವಾಗಿ ವ್ಯಕ್ತ ಪಡಿಸುತ್ತಿದ್ದರು ಎಂಬ ಲೇಖಕಿಯ ಅಭಿಪ್ರಾಯ, ಆಕೆಯಿಲ್ಲರುವ ಪುರುಷ ಪ್ರಧಾನ ಧೋರಣೆಯನ್ನು ಪ್ರತಿಬಿಂಬಿಸುತ್ತದೆ. ಇಂತಹ ಸಂದರ್ಭದಲ್ಲಿ ಜಾರ್ಜ್ ಫರ್ನಾಂಡಿಸ್ ರಂತವರು ಭಾರತೀಯ ಮಹಿಳೆಯರ ಮೇಲೆ ಅತ್ಯಾಚಾರ ನಡೆದಿರುವುದು ಹೊಸ ಸಂಗತಿಯೇನಲ್ಲ ಎಂಬ ಹೇಳಿಕೆಯನ್ನು ಅರಗಿಸಿಕೊಳ್ಳುವುದು ತೀರಾ ಕಠಿಣವಾಗಲಾರದು. ಕೋಮು ಗಲಭೆಯನ್ನು ಅತ್ತೆ-ಸೊಸೆಯ ಸಂಬಂಧಕ್ಕೆ ಹೋಲಿಸಿರುವುದು ಲೇಖಕಿಯ ಬಾಲಿಶತನವನ್ನು ತೋರಿಸುತ್ತದೆಯಲ್ಲದೆ, ಪಿತೃಪ್ರಧಾನತೆ, ಕೋಮುವಾದದ ಬಗೆಗಿರುವ ಅಸ್ಪಷ್ಟತೆಯನ್ನು ತಿಳಿಸುತ್ತದೆ. ಗುಜರಾತ್ ಘಟನೆಯಲ್ಲಿ ಆದಿವಾಸಿಗಳ ಪಾತ್ರವನ್ನು ಒತ್ತಿ ಹೇಳಿರುವುದು, ಹಾಗೂ ಸಂಘಪರಿವಾರದವರ ಪಾತ್ರದ ಬಗ್ಗೆ ಮೌನವಾಗಿರುವುದು ಲೇಖಕಿಯ ಉದ್ದೇಶವನ್ನು ಹೇಳುತ್ತದೆ. ಲೇಖಕಿಗೂ ಹಾಗೂ ಓದುಗರಿಗೂ ನಾವು ಒಂದು ಅಂಶವನ್ನು ನೆನಪಿಸಬಯಸುತ್ತೇವೆ, ''ಕೋಮು ಸಾಮರಸ್ಯ, ಹೊಂದಾಣಿಕೆ ಸಾಧ್ಯವಾಗುವುದು ಸತ್ಯವನ್ನು ಒಪ್ಪಿಕೊಂಡಾಗ ಮಾತ್ರ.''

## ಗುಜರಾತ್ ಹಿಂಸಾಕಾಂಡದ ವಿರುದ್ಧ ಮಹಿಳೆಯರು

ಗುಜರಾತ್‌ನಲ್ಲಿ ನಡೆಯುತ್ತಿರುವ ಹಿಂಸಾಕಾಂಡದಲ್ಲಿ ಮಹಿಳೆಯರ ಮೇಲೆ ಸತತವಾಗಿ ನಡೆಯುತ್ತಿರುವ ಅತ್ಯಾಚಾರ ದೌರ್ಜನ್ಯವನ್ನು ಮತ್ತು ಧಾರ್ಮಿಕ ಅಲ್ಪಸಂಖ್ಯಾತರ ಮೇಲೆ ಸಂಘ ಪರಿವಾರದವರು ನಡೆಸುತ್ತಿರುವ ಹಿಂಸಾಕಾಂಡವನ್ನು ವಿರೋಧಿಸಿ ಬೆಂಗಳೂರಿನಲ್ಲಿರುವ ಅನೇಕ ಮಹಿಳಾ ಸಂಘಟನೆಗಳು, ಸರ್ಕಾರೇತರ ಸಂಸ್ಥೆಗಳು ಇತರೆ ಸಾಮಾಜಿಕ ಸಂಸ್ಥೆಗಳವರು ಸೇರಿ ಕಾರ್ಪೊರೇಷನ್ ಸರ್ಕಲ್‌ನಲ್ಲಿ ಮೇ 13, 2002 ರಂದು ಗುಜರಾತ್ ಹಿಂಸಾಕಾಂಡವನ್ನು ವಿರೋಧಿಸುವ ದಿನವನ್ನಾಗಿ ಆಚರಿಸುವ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿತ್ತು .

ಈ ಕಾರ್ಯಕ್ರಮದ ನಿರೂಪಣೆಯನ್ನು 'ಜನವಾದಿ ಮಹಿಳಾ ಸಂಘಟನೆ'ಯ ವಿಮಲಾರವರು ಮಾಡಿದರು. ಜಾಗೃತಿ ಅಧ್ಯಯನ ಕೇಂದ್ರ ಮತ್ತು ಜಾರ್ಖಂಡೆ ಗುಂಪಿನವರು ಕೋಮು ಸೌಹಾರ್ದತೆಯ ಹಾಡುಗಳನ್ನು ಹಾಡಿದರು. ಈ ಕಾರ್ಯಕ್ರಮದಲ್ಲಿ ನರಮೇಧ ಮೋದಿ ಭೂತದೆದುರು ಶಾಪಹಾಕುವ ಕಾರ್ಯಕ್ರಮ ವಿಶೇಷವಾಗಿತ್ತು.

ಬಾಬು ಮ್ಯಾಥ್ಯೂರವರು ಮಾತಾನಾಡುತ್ತಾ, ಬೆಂಗಳೂರು ನಗರದಲ್ಲಿ ಮಹಿಳಾ ಸಂಘಟನೆಗಳು ಹಮ್ಮಿಕೊಂಡಿರುವ ಈ ಕಾರ್ಯಕ್ರಮ ನಿಜಕ್ಕೂ ಹೆಮ್ಮೆಯ ಸಂಗತಿ, ಗುಜರಾತಿನಲ್ಲಿ ಸರ್ಕಾರವು ಕೋಮುವಾದಿಗಳ ಜೊತೆ ಸೇರಿ ಕೋಮುದಳ್ಳುರಿಗೆ ಪ್ರೋತ್ಸಾಹ ಕೊಟ್ಟಿದೆ. ಪೊಲೀಸರ ಬಳಿ ರಕ್ಷಣೆಯನ್ನು ಕೇಳಿದರೆ ಶಿಕ್ಷೆಯನ್ನು ಕೊಡಲಾಗುತ್ತಿದೆ. ಕೋಮು ಸೌಹಾರ್ಧತೆಯನ್ನು ಕಾಪಾಡಬೇಕಾದ ಪೊಲೀಸರು ಹಿಂಸೆಯನ್ನು ಬೆಂಬಲಿಸುತ್ತಿದ್ದಾರೆ. ಇದು ನಿಜಕ್ಕೂ ಬಹಳ ದುಃಖ ಪಡಬೇಕಾದ ಪರಿಸ್ಥಿತಿ ಎಂದರು.

ಈ ಸಭೆಯನ್ನುದ್ದೇಶಿಸಿ ಚನ್ನಮಲ್ಲ ಸ್ವಾಮೀಜಿಯವರು ಮಾತನಾಡುತ್ತಾ, ಕೋಮುದಳ್ಳುರಿಗೆ ಬೆಂಬಲ ನೀಡುತ್ತಿರುವ ಗುಜರಾತ್ ಸರ್ಕಾರವನ್ನು ವಿರೋಧಿಸಬೇಕು. ರಾಜ್ಯದ, ದೇಶದ ಶಾಂತಿ ಸೌಹಾರ್ದ ಕಾಪಾಡುವುದು ಸರ್ಕಾರ ಮತ್ತು ಎಲ್ಲಾ ಜನರ ಆದ್ಯ ಕರ್ತವ್ಯವಾಗಬೇಕು. ಫ್ಯಾಸಿಸ್ಟ್ ಶಕ್ತಿಗಳು ಆಯಾ ಧರ್ಮದ ಒಳಿತನ್ನು ನಾಶಮಾಡುತ್ತವೆ ಎಂದರು.

ಹೇಮಲತಾ ಮಹಿಷಿ, ರಾಮೇಶ್ವರಿ ವರ್ಮ, ಶಹನಾಜ್, ನಸೀಮ್ ಬೇಗಂ ಮುಂತಾದವರು ಮಾತನಾಡುತ್ತಾ, ಕೋಮು ಸೌಹಾರ್ಧತೆಯನ್ನು ನಾಶ ಮಾಡುವ ಧರ್ಮ ನಮಗೆ ಬೇಡ, ಶಾಂತಿ ಸೌಹಾರ್ದತೆಯನ್ನು ಕಾಪಾಡಿಕೊಂಡು ಬೆಳೆಸುವಂತಹ ಮಾನವ ಧರ್ಮ ನಮಗೆ ಬೇಕು. ಕೋಮುದಳ್ಳುರಿಯೆಂಬ ವಿಷದ ಬೀಜವನ್ನು ಎಲ್ಲೆಡೆ ಬಿತ್ತುತ್ತಿರುವುದನ್ನು ನಾವು ಪ್ರೋತ್ಸಾಹಿಸಬಾರದು ಬದಲಿಗೆ ಅದನ್ನು ಕಿತ್ತು ಎಸೆಯಬೇಕು ಎಂದರು.

-ವರದಿ

ಮಾನಸ ಪತ್ರಿಕೆ ಯಾವ ಸಂಸ್ಥೆಯ, ಸರ್ಕಾರದ ನೆರವಿಲ್ಲದೇ ಪ್ರಕಟವಾಗುತ್ತಿರುವ ಮಹಿಳೆಯರೇ ನಡೆಸುತ್ತಿರುವ ಸ್ವಾಯತ್ತ ಪತ್ರಿಕೆ. ಓದುಗರು ಹಾಗೂ ಸಹೃದಯರು ನೀಡುವ ಆರ್ಥಿಕ ನೆರವೇ ಪತ್ರಿಕೆಯ ಜೀವಾಳ. ಚಂದಾದಾರರಿಗೆ ಚಂದಾ ಅವಧಿ ಮುಕ್ತಾಯವಾದುದರ ಬಗ್ಗೆ ಸೂಚನೆಯನ್ನು ನೀಡಲಾಗುತ್ತದೆ. ಓದುಗರು ತಕ್ಷಣ ಚಂದಾ ನವೀಕರಿಸಬೇಕೆಂದ ಕೋರುತ್ತೇವೆ. ಪತ್ರಿಕೆಯು ಉಳಿದು ಬೆಳೆಯಬೇಕಾದರೆ ಓದುಗರ ಸಹಕಾರ ಅತ್ಯಗತ್ಯ.

**ವಾರ್ಷಿಕ ಚಂದಾ : 50 ರೂ**

**ಸಂಸ್ಥೆಗಳಿಗೆ : 100 ರೂ**

ಸಂ. ಮಂಡಳಿ

REGD No. : CPMG/KA/BGE/289/2002

BOOK - POST
PRINTED MATTER

ವಿಳಾಸ:
ಮಾನಸ
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು - 560 067